**11-4-93 ನೆರವೇರಿಸಿದ ಪೂಜ್ಯ ಶ್ರೀ ಶ್ರೀಗಳವರ 86ನೇ ಜನ್ಮದಿನೋತ್ಸವ ದೃಶ್ಯ.**



ರಾಜ್ಯ ಕಾನೂನು ಸಚಿವ ಹಾರ್ನಹಳ್ಳಿ ಶ್ರೀ ರಾಮಸ್ವಾಮಿಯವರನ್ನು ಶ್ರೀ ಶ್ರೀಗಳವರು ಆಶೀರ್ವದಿಸುತ್ತಿರುವುದು. ಅಧ್ಯಕ್ಷರಾದ ಶಿವಮೊಗ್ಗ ಜಿಲ್ಲೆ ಆನಂದಪುರ ಮಠದ ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರಸ್ವಾಮಿಗಳವರು ಮತ್ತು ಲೋಕಸಭಾ ಉಪಾಧ್ಯಕ್ಷ ಶ್ರೀ ಎಸ್. ಮಲ್ಲಿಕಾರ್ಜುನರು ಭಾಗವಹಿಸಿದ್ದರು.



ತುಮಕೂರು ಗಣ್ಯವರ್ತಕರಾದ ಶ್ರೀ ಕೋರಿ ಮಂಜುನಾಥ್ ಸಹೋದರರು ಪೂಜ್ಯರ ನಿಲುವಿನ ಭಾರಿ ಹೂವಿನ ಹಾರ ಮತ್ತು ಹೂವಿನ ಕಿರೀಟವನ್ನು ತೊಡಿಸಿ ಭಕ್ತಿನಮನಗಳನ್ನು ಅರ್ಪಿಸುತ್ತಿರುವುದು.

# ಸಿದ್ಧಗಂಗಾ

ಸಂಪುಟ-30. ಸಂಚಿಕೆ-4. ಏಪ್ರಿಲ್-1993.

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ.

ಲಿಂಗಾನುಸಂಧಾನಿ ಲಿಂಗಾನುಭಾವಿಯೆ
ಲಿಂಗಸಂಗಹೊಳಿಹ ಶಿವಯೋಗಿ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ಗುರುವಿಂಗೆ ಅಧಿಕರು ಜಗದಲ್ಲಿ ಯಾರಿಹರು
ಗುರುವೆ ಪರಮ ಬಂಧುವೆನುತಿಹರು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ಭವ ಹರಣ ಶ್ರೀಗುರುವೆ ಸುಖಕರಣ ಶ್ರೀಗುರುವೆ
ಶಿವಭಕ್ತ ಹೃದಯಾಭರಣವೇ ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು. ॥

⁜ + ⁜ ÷ ⁜

—ಹೆಚ್. ವಿ. ವೀರಭದ್ರಯ್ಯ.

# ಶ್ರೀವಾಣಿ



ನಮ್ಮ ಪ್ರಜಾಪ್ರಭುತ್ವ ರಾಷ್ಟ್ರ ವ್ಯವಸ್ಥೆಯಲ್ಲಿ ಸರ್ವಾಂಗೀಣ ಸುಂದರ ಸಮಾಜ ನಿರ್ಮಾಣವನ್ನು ಮಾಡುವ ಯೋಜನೆಗಳು ರೂಪಿತವಾಗಿವೆ. ಅದಕ್ಕಾಗಿ ಕೋಟಿ ಕೋಟಿ ರೂಪಾಯಿಗಳು ಖರ್ಚಾಗುತ್ತಿವೆ. ಯೋಜನಾತಜ್ಞರು ಮಾಡುತ್ತಿರುವ ವಿಚಾರ ಸಂಕಿರಣ, ಗೋಷ್ಠಿ, ಸಭೆಗಳು ಮೇಲಿಂದ ಮೇಲೆ ನಡೆಯುತ್ತಿವೆ ವರದಿಗಳು ಬರುತ್ತಿವೆ. ಅನುಷ್ಠಾನಕ್ಕೆ ಬರುವಂಥವೂ ಕೆಲವಿವೆ. ಪಂಚವಾರ್ಷಿಕ ಯೋಜನೆ ಯಂತೂ ಎಂಟನೆಯ ಆವರ್ತದಲ್ಲಿ ಮುಂದುವರಿದಿದೆ. ಜೀವನಕ್ಕೆ ಬೇಕಾದ ಅನೇಕ ವಿಷಯಗಳನ್ನು ಕುರಿತ ಯೋಜನೆಗಳಿವೆ. ಶಿಕ್ಷಣಕ್ಕೆ ಸಂಬಂಧಿಸಿದಂತೆ ಯೋಜನೆಗಳು ಕಾರ್ಯನಿರತವಾಗಿವೆ. “ ಅಲ್ಪಶ್ರಮ ಅಧಿಕಲಾಭ ” ದೃಷ್ಟಿಯ ಯೋಜನೆಗಳು ಆಕರ್ಷಕವಾಗುತ್ತಿವೆ. ಉತ್ತಮ ಇಂಜನಿಯರನ್ನು, ವೈದ್ಯರನ್ನು, ಶಿಕ್ಷಕರನ್ನು, ತಂತ್ರಜ್ಞರನ್ನು, ರೈತರನ್ನು ಕಲಾವಿದರನ್ನು, ವಿಜ್ಞಾನಿಗಳನ್ನು, ವೃತ್ತಿ ವಿದರನ್ನು, ಸಾಹಿತಿಗಳನ್ನು ತಯಾರಿಸುವ ಕಮ್ಮಟಗಳು ನಡೆಯುತ್ತಿವೆ. ಎಲ್ಲವೂ ಅಪೇಕ್ಷಣೀಯ. ಅಂತೆಯೇ ಆಧ್ಯಾತ್ಮ ಜೀವಿಗಳನ್ನು ಸೃಷ್ಟಿಸುವ ಮಹಾ ಮಣಿಹವೂ ಆವಶ್ಯಕವಲ್ಲವೆ? ನಮ್ಮಲ್ಲಿರುವ ಅನೇಕ ಆಧ್ಯಾತ್ಮಿಕ ಸಂಘ, ಸಂಸ್ಥೆಗಳು ಈ ಮಾರ್ಗದಲ್ಲಿ ಶ್ರಮಿಸುತ್ತಿರುವುದು ಸ್ಮರಣೀಯ. ಆದರೆ ಅವುಗಳ ಗುರಿ ಇನ್ನೂ ವ್ಯಾಪಕವಾಗಬೇಕಲ್ಲವೆ? ಬಸವಾದಿ ಶರಣರು ರೂಪಿಸಿದ ಮಾರ್ಗವನ್ನು ಅನುಸರಿಸುವುದು ಇಂದು ಅಗತ್ಯವೆನಿಸಲಾರದೆ? ನಮ್ಮ ಸ್ವಯಂ ಸೇವಾ ಸಂಸ್ಥೆಗಳು ಅವೆಷ್ಟೇ ದೇಶ ವಿದೇಶ ಪ್ರಖ್ಯಾತವಾಗಿರುವುದಾದರೂ-ಶರಣರು ಸೃಷ್ಟಿಸಿದ ಹರಳಯ್ಯ, ಕಕ್ಕಯ್ಯ, ರಂಥವರನ್ನು ರೂಪಿಸಲಾಗಿಲ್ಲ. ಜತೆಗೆ ವೋಟು (Vote)ಕೊಟ್ಟು ರಾಷ್ಟ್ರಪತಿಗಳನ್ನು, ಪ್ರಧಾನಮಂತ್ರಿಗಳನ್ನು, ಶಾಸಕರನ್ನು ಚುನಾಯಿಸಬಹುದು. ಆದರೆ ಹರಳಯ್ಯ, ಕಕ್ಕಯ್ಯ ರಂಥವರನ್ನು ರೂಪಿಸುವುದು ಹೇಗೆ? ಅನುಭಾವಗಳನ್ನು ನಿರ್ಮಾಣ ಮಾಡುವುದೆಂತು ? ಸುಂದರ ಸಮಾಜ ನಿರ್ಮಾಣ ಮಾಡುವಲ್ಲಿ ಅನುಭಾವಿಗಳ ಅಗತ್ಯವಿಲ್ಲವೆ ? ಯುಗಧರ್ಮಕ್ಕೆ ಸ್ಪಂದಿಸುವ ಶಿಕ್ಷಣ ಹರಳಯ್ಯ, ಕಕ್ಕಯ್ಯಗಳಂಥ ಆದರ್ಶ ವ್ಯಕ್ತಿಗಳನ್ನು ನಿರ್ಮಿಸುವ ಯೋಜನೆಗಳನ್ನು ನಿಯೋಜಿಸಿಕೊಳ್ಳಬೇಕಾಗಿದೆ.

[16.4.93 ರಂದು ಪಾಂಡುಪುರ ತಾ॥, ಬೇಬಿ ಗ್ರಾಮದಲ್ಲಿ ಮಾಡಿದ ಬಸವ ಜಯಂತಿ ಸಮಾರಂಭ ಆಶೀರ್ವಚನದಿಂದ ಆಯ್ದಭಾಗ]

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷ ತ್ರಿವಿಧ ದಾಸೋಹ ಮೂರ್ತಿಗಳಾದ
ಪರಮ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ

## "ವಜ್ರಮಹೋತ್ಸವ ನಿಧಿ ಸಮಿತಿ".

"ಶಿವಪಥವನರಿವಡೆ ಗುರುಪಥವೇ ಮೊದಲು"

ಎಂಬಂತೆ ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳ ಕರಕಮಲ ಸಂಜಾತರಾಗಿ 60 ವರ್ಷಗಳ ಸೇವಾ ಮಣಿಹದ ಸ್ಮರಣೆಗಾಗಿ ನಾಡಿನ ಭಕ್ತಕೋಟಿ ವಜ್ರಮಹೋತ್ಸವ ಆಚರಿಸಲು ನಿರ್ಧರಿಸಿದೆ.

ವಜ್ರಮಹೋತ್ಸವ ನೆನಪಿನ ಪ್ರತಿಷ್ಠಾನ :
4 ಕೋಟಿ ರೂಗಳ ವೆಚ್ಚದಲ್ಲಿ
ಬೃಹತ್ ವಿದ್ಯಾರ್ಥಿ ವಸತಿ ನಿಲಯ
ಮತ್ತು
ಬೃಹತ್ ಪ್ರಸಾದ ನಿಲಯ.
(16-2-92) ರಂದು

ಭಾರತದ ರಾಷ್ಟ್ರಪತಿ ಡಾ|| ಶ್ರೀ ಶಂಕರದಯಾಳ ಶರ್ಮ ಮತ್ತು ಲೋಕಸಭಾಧ್ಯಕ್ಷ ಶ್ರೀ ಶಿವರಾಜ್ ಪಾಟೀಲ್ ಇವುಗಳ ಶಿಲಾನ್ಯಾಸವನ್ನು ನೆರವೇರಿಸಿದ್ದಾರೆ.

5/–, 10/–, 25/-, 51/-, 101/–, 201/-, 501/–, 1001/ 5001/-, 10,001/–, 35,000 ರೂ.ಗಳ ಕೂಪನ್‌ಗಳು ನಿಧಿ ಸಂಗ್ರಹಕ್ಕಾಗಿ ಮಾರಾಟಕ್ಕೆ ಬಿಡುಗಡೆ ಮಾಡಿದೆ.

ಈ ಸ್ಮರಣಾರ್ಹವಾದ ಪುಣ್ಯಕಾರ್ಯಕ್ಕೆ ನಾಡಿನ ಭಕ್ತಾದಿಗಳು, ಹಿತೈಷಿಗಳು, ಹಳೆಯ ವಿದ್ಯಾರ್ಥಿಗಳು ಕೂಪನ್‌ಗಳನ್ನು ಕೊಳ್ಳುವುದರ ಮೂಲಕ ನಿಧಿಗೆ ಉದಾರವಾಗಿ ನೀಡಬೇಕಾಗಿ ಕೋರುತ್ತೇವೆ.

ಬಿ. ಎಸ್. ಮುದ್ದಪ್ಪ, ಐ.ಎ.ಎಸ್,
ಕಾರ್ಯಾಧ್ಯಕ್ಷರು,

ಪದ್ಮಭೂಷಣ ಡಾ|| ಎಂ. ಸಿ. ಮೋದಿ,
ಅಧ್ಯಕ್ಷರು,
ವಜ್ರಮಹೋತ್ಸವ ಸಮಿತಿ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ–572 104.

ಎಸ್. ಎಸ್. ಹಸಬಿ,
ಕಾರ್ಯದರ್ಶಿಗಳು.

## ಶ್ರೀ ಸಿದ್ಧಲಿಂಗೇಶ್ವರ ವಚನ



ಪರುಷ ಸೋಂಕಲು ಅವಲೋಹದ ಗುಣಕೆಟ್ಟು ಚಿನ್ನವಾಗದಿಹುದೆ ?
ಹಲವು ತೃಣಂಗಳೆಲ್ಲವು ಅಗ್ನಿಯ ಮುಟ್ಟಲು ಭಸ್ಮವಾಗದಿಹವೆ ?
ಹಳ್ಳಕೊಳ್ಳ ನೀರೆಲ್ಲ ಬಂದು ಅಂಬುಧಿಯನೆಯ್ದಿ ಅಂಬುಧಿಯಪ್ಪದು ತಪ್ಪದು ನೋಡಾ!
ಹಲವು ವರ್ಣದ ಪದಾರ್ಥವೆಲ್ಲವತಂದು ಶಿವಲಿಂಗಾರ್ಪಣವ ಮಾಡಲು
ಆ ಪದಾರ್ಥ ಪೂರ್ವಾಶ್ರಯವಳಿದು ಪ್ರಸಾದವಪ್ಪುದು ತಪ್ಪದು ನೋಡಾ !
ಆ ಪ್ರಸಾದವ ಕೊಂಬ ಪ್ರಸಾದಿ ಪವಿತ್ರ ಕಾಯನು ನೋಡಾ !
ಆತನು ಶುದ್ಧ ನಿರ್ಮಲನು ನೋಡಾ !
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ||

ಕಬ್ಬಿಣವು ಸಣ್ಣಧಾತು, ಬಂಗಾರವು ದೊಡ್ಡಧಾತು ಎನಿಸಿರುವವಷ್ಟೆ ! ಇಂತಹಕಬ್ಬಿಣಕ್ಕೆ ಪರುಷಮಣಿಯ ಸ್ಪರ್ಶವಾದ ಮೇಲೆ ಅದು ತನ್ನ ಕೀಳುತನವನ್ನು ಕಳೆದುಕೊಂಡು ಬಂಗಾರವೇ ಆಗಿಬಿಡುವುದಲ್ಲವೆ? ಹಲವು ವಿಧವಾದ ಹುಲ್ಲನ್ನು ಬೆಂಕಿಯು ಮುಟ್ಟಿದ ಮೇಲೆ ಅದೆಲ್ಲ ಸುಟ್ಟು ಬೂದಿಯಾಗುವುದಲ್ಲವೆ? ಹಳ್ಳ-ಕೊಳ್ಳಗಳಲ್ಲಿದ್ದ ನೀರೆಲ್ಲ ಸಮುದ್ರವನ್ನು ಮುಟ್ಟಿದ ಮೇಲೆ ಆ ನೀರೆಲ್ಲ ಸಮುದ್ರವೇ ಆಗುವುದಲ್ಲವೆ? ಹಾಗೆ ಅನೇಕ ಪದಾರ್ಥಗಳನ್ನು ಶಿವಲಿಂಗಕ್ಕೆ ಅರ್ಪಿಸಿದಾಗ ಅವೆಲ್ಲ ಪದಾರ್ಥಗಳು ತಮ್ಮ ಪೂರ್ವಾಶ್ರಯವನ್ನೇ ಕಳೆದುಕೊಂಡು ಪ್ರಸಾದವಾಗುವುವು. ಪ್ರಸಾದವನ್ನು ಸೇವಿಸುವವನು ಪ್ರಸಾದಕಾಯ-ಪವಿತ್ರ ಕಾಯನಾಗುವನು. ಭೋಗಕೆಟ್ಟದಲ್ಲ, ಆದರೆ ವಿಷಯ ಭೋಗವು ಮಾತ್ರ ಬಂಧನಕಾರಿಯಾದ್ದರಿಂದ ಅನಿಷ್ಟ. ಪ್ರಸಾದಭೋಗವು ಮೋಚಕವಾದ್ದರಿಂದ ಇಷ್ಟಕರ. ಅಂತೆಯೇ ವಿಷಯ ಭೋಗದಿಂದ ದುಃಖ, ಪ್ರಸಾದ ಭೋಗದಿಂದ ಪರಮಾನಂದ ಲಭಿಸುವುದೆಂದು ಅನುಭವಿಗಳು ಹೇಳಿದ್ದಾರೆ. ಲಿಂಗಪ್ರಸಾದ ಭೋಗಿಯ ದೇಹವು ಲಿಂಗಮಯವಾಗಿ ಪರಿವರ್ತಿಸವುದು. ಅವನು ಮಾಯಾರಾಜ್ಯದಿಂದ ಬಿಡುಗಡೆ ಹೊಂದಿ ನಿತ್ಯಸುಖಿಯಾಗ ಬಲ್ಲನು.

[ಕೃಪೆ :- ಷಟ್‌ಸ್ಥಲ ಜ್ಞಾನಸಾರಮೃತ, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ ಸೇವಾ ಸಂಘ. ಎಡೆಯೂರು-ಗದಗ]

ಸಿದ್ಧಗಂಗಾ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ - 572 104
ತುಮಕೂರು ಜಿಲ್ಲೆ

ಡಾ|| ಎಂ. ಎನ್. ಚನ್ನಬಸಪ್ಪ
ಪ್ರಧಾನ ಕಾರ್ಯದರ್ಶಿಗಳು
ಹಳೆಯ ವಿದಾರ್ಥಿ ಸಂಘ

* * *

ಪ|| ಚನ್ನಪ್ಪ ಎರೇಸೀಮೆ
ಪ್ರಧಾನ ಸಂಪಾದಕರು

* * *

ಹೆಚ್. ವಿ. ವೀರಭದ್ರಯ್ಯ
ಸಂಪಾದಕರು

* * *

ಬಿ. ವೀರಭದ್ರಯ್ಯ
ಪಿ. ಎನ್. ಚಂದ್ರಶೇಖರಯ್ಯ
ಎಂ. ರೇಣುಕಾರಾಧ್ಯ
ಸಂಪಾದಕ ಮಂಡಳಿ

* * *

ಹೆಚ್. ಬಿ. ಗಂಗಾಧರಯ್ಯ
ಪ್ರಕಾಶಕರು

* * *

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಮುದ್ರಣಾಲಯ
ಮುದ್ರಕರು

* * *

ಶ್ರೀ ಸಿದ್ಧಗಂಗಾಕ್ಷೇತ್ರ
ಪ್ರಕಟಣೆಯ ಸ್ಥಳ

ಚಂದಾ ವಿವರ
ವಾರ್ಷಿಕ ಚಂದಾ 25-00ರೂ
ಆಜೀವ ಸದಸ್ಯತ್ವ 300-00

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

" ಸಂಪಾದಕರು "
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ-572104.
ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

ಬಸವಾ ನೀನು ಜಗದಣ್ಣನಾದದ್ದು, ಇಷ್ಟಲಿಂಗವನ್ನು ಕೊಟ್ಟಿದ್ದರಿಂದಲ್ಲ; ಮನದಿಷ್ಟದಿಂದ ಎಲ್ಲರನ್ನೂ ಅಪ್ಪಿಕೊಂಡದ್ದರಿಂದ. ಬಸವಾ, ನೀನು ವಿಶ್ವಗುರುವಾದದ್ದು ಹೊಸ ಧರ್ಮವನ್ನು ಸ್ಥಾಪಿಸಿದುದರಿಂದಲ್ಲ; ಅದನ್ನು ದೀನ ದಲಿತರಿಗೆ ಮುಟ್ಟಿಸಿದುದರಿಂದ. ಬಸವಾ, ನೀನು ಜಗಜ್ಯೋತಿಯಾದದ್ದು ಕರ್ಪುರ ಜ್ಯೋತಿ ಬೆಳಗಿದುದರಿಂದ; ನೀನೆ ಕರ್ಪುರವಾಗಿ ಉರಿದು ಮಂಗಳದ ಬೆಳಕ ತುಂಬಿದುದರಿಂದ. ಯುಗಶಕ್ತಿ ಜಗಶಕ್ತಿಯಾಗಿ ಬೆಳೆದು ಕಲ್ಯಾಣ ಕಿರಣಗಳಿಂದ ತಿಪ್ಪೇರುದ್ರಪ್ರಭುವನ್ನು ತಿರೆಗಿಳಿಸಿತಂದ ಆತ್ಮಸಾಹಸದಿಂದ.

ಡಾ|| ಎಚ್. ತಿಪ್ಪೇರುದ್ರಸ್ವಾಮಿಯವರ ಒಂದು ವಚನ ಇದು. ಬಸವಣ್ಣನ ಹಿಮಾಲಯ ಸದೃಶವಾದ ವ್ಯಕ್ತಿತ್ವವನ್ನು ಸುಂದರವಾಗಿ ಕಡೆದಿಟ್ಟಿರುವ ವಚನಗನ್ನಡಿ ಮತ್ತೆ ಮತ್ತೆ ಓದಬೇಕು ಎನಿಸುತ್ತದೆ. ಚಿಂತನ-ಮಂಥನ ಮಾಡಬೇಕೆನಿಸುತ್ತದೆ. ಬಸವಣ್ಣನ ಶುದ್ಧ ಸ್ಪಟಿಕ ನಿರ್ಮಲ ವ್ಯಕ್ತಿತ್ವವನ್ನು ಇದಕ್ಕಿಂತ ಸುಂದರವಾಗಿ ಹೇಳುವುದಾದರೂ ಹೇಗೆ? ಇಷ್ಟಲಿಂಗವನ್ನು ಅಪ್ಪಿಕೊಂಡು ಬಸವಣ್ಣ ಬೆಳೆದ-ಬಸವಣ್ಣನ ಹೃದಯಾಭರಣವಾದ ಇಷ್ಟಲಿಂಗ ತಾನೂ ಬೆಳೆಯಿತು.ದೀನ ದಲಿತರನ್ನು ಅಪ್ಪಿಕೊಳ್ಳುವುದರ ಮೂಲಕ. ಲಿಂಗಕ್ಕೆ ಬಾಯಿಯಾಗಿ, ತಾಯಿಬೇರಾಗಿ ಬಸವಣ್ಣ ಸಮಾಜದ ಎಲ್ಲ ವರ್ಗದವರನ್ನು ಅಂತಃಕರಣ ಪೂರ್ವಕವಾಗಿ, ಆತ್ಮೀಯ ಭಾವದಿಂದ ಅಪ್ಪಿಕೊಂಡು ಲಿಂಗದ ಪವಿತ್ರತೆಯನ್ನೇ ವ್ಯಾಪಕಗೊಳಿಸಿದ. ವಿಶ್ವಗುರುವಾದ ಬಸವಣ್ಣ ಹೊಸಧರ್ಮ ಸ್ಥಾಪಿಸಿಯಲ್ಲ. ಧರ್ಮ ಕೆಲವರ ಗುತ್ತಿಗೆಯಾಗಿದ್ದುದನ್ನು ಕಂಡು ನೊಂದು ಅದರ ಬಂಧಮುಕ್ತಿಗೊಳಿಸಿದ ದೀನ ದಲಿತರಿಗೆ ದನಿಯಾಗಿ, ಬಾಯಾಗಿ ಅವರೆಲ್ಲರ ಬೆಳಕಾಗಿ, ನಿಜವಾದ ಅರ್ಥದಲ್ಲಿ ಬಸವಣ್ಣ 'ದಲಿತಸೂರ್ಯ". ಬಸವಣ್ಣ ಕರ್ಪುರವಾಗಿ ಉರಿದ ಲೋಕದ ಒಳಿತಿಗಾಗಿ. ಬಸವಣ್ಣ ಉದಯವಾಗಿ 888 ವರ್ಷಗಳು ಬಂದರೂ "ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವ ನೆರೆದು, ಆಚಾರವೆಂಬ ಬತ್ತಿಯನಿಕ್ಕಿ, ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಿದುದರಿಂದ'. ಮಾನವೀಯತೆಯ ಮಂಗಳ ದೀಪಗಳು ಇನ್ನೂ ಅಲ್ಲಿ ಇಲ್ಲಿ ಬೇರೆ ಬೇರೆ ಹೆಸರು ತಳೆದು ಬೆಳಗುತ್ತಿವೆ.

" ಸಮೂಹನಾಯಕನಾಗಿ, ಸ್ವತಂತ್ರ ವಿಚಾರ ಶೀಲನಾಗಿ, ಕ್ರಾಂತಿಕಾರಿಯಾಗಿ, ಅನುಭಾವಿಯಾಗಿ, ದಾರ್ಶನಿಕ ಕವಿಯಾಗಿ, ಪ್ರವಾದಿಯಾಗಿ ಲೋಕ ಸಂಗ್ರಹಕಾರ್ಯ ಕಾರಣಿಕ ವಿಭೂತಿಯಾದ ಬಸವಣ್ಣನ ಗಗನೋಪಮ ವ್ಯಕ್ತಿತ್ವವನ್ನು ಅರಿತುಕೊಂಡು ಆಧುನಿಕ ಮನಸ್ಸುಗಳು ಬಾಳಬೇಕಾದ ಅಗತ್ಯ ಯಾವತ್ತೂ ಇದ್ದೇ ಇದೆ. ಆದರೆ ವ್ಯಂಗ್ಯವೆಂದರೆ ಬಸವಣ್ಣನಿಗೆ ಪೂರ್ವದಲ್ಲಿ ಲಿಂಗವಿತ್ತೆ ? ಇಷ್ಟಲಿಂಗ ಧಾರಣ ಸಂಪ್ರದಾಯವಿತ್ತೆ ? ವೀರಶೈವವಿತ್ತೆ ? ಬಸವಣ್ಣನೇ ಇಷ್ಟಲಿಂಗ ಜನಕ-ಮುಂತಾದ ಚರ್ಚೆಗಳಲ್ಲಿ ಇಂದು ಬಸವಾಭಿಮಾನಿಗಳು ಸಂಶೋಧನಾಮುಖಿಗಳಾಗುತ್ತಿರುವುದು. ಬಸವಣ್ಣ ಜಗತ್ತಿಗೆ ನೀಡಿದ ಕಾಯಕ, ದಾಸೋಹ, ಮಾನವೀಯತೆಯಂತಹ ಮಹಾ ಮೌಲ್ಯಗಳನ್ನು ಅನುಷ್ಠಾನಕ್ಕೆ ತರುವುದರತ್ತ ಶ್ರಮಿಸಬೇಕಾಗಿದೆ. ಬಸವ-ಜಯಂತಿಯಂದು ಆತ್ಮ ಪರೀಕ್ಷೆ ಮಾಡಿಕೊಳ್ಳಬೇಕಾಗಿದೆ ದಲಿತರ ಮೇಲೆ ನಡೆಯುತ್ತಿರುವ ದೌರ್ಜನ್ಯ, ದರ್ಪ, ಶೋಷಣೆಗಳನ್ನು ಬಸವ ಬೆಳಕಿನಲ್ಲಿ ತೊಳೆಯಬೇಕಾಗಿದೆ. ಡಾ|| ತಿಪ್ಪೆರುದ್ರಸ್ವಾಮಿಯವರದೇ ಒಂದು ಮಾತಿದೆ "ಬಸವಣ್ಣನ ಅನುಯಾಯಿಗಳನ್ನು ನೋಡಿ ಬಸವಣ್ಣನನ್ನು ಅಳೆಯ ಬಾರದು" ಎಂಬುದಾಗಿ. ಬಸವ ಸಂದೇಶವನ್ನು ಮರೆತ ಸಮಾಜವನ್ನು ಕಂಡು ನೊಂದು ನುಡಿದ ಮಾತಿದು. ಇನ್ನಾದರೂ ಬಸವಣ್ಣನ ಸಂದೇಶವನ್ನು ಗೌರವಿಸುವ, ಆರಾಧಿಸುವ ಜೀವನ ವಿಧಾನ ನಮ್ಮದಾಗಲಿ ಎಂದು " ಸಿದ್ಧಗಂಗಾ " ಆಶಿಸುತ್ತದೆ.





## ಭಕ್ತಿ-ಹಳತು ಹೊಸದು ಒಂದು ಸಮನ್ವಯ

—ಡಾ|| ಕೆ. ಶ್ರೀಕಂಠಯ್ಯ, 293, 1 ಬ್ಲಾಕ್, ಜಯನಗರ, ಬೆಂಗಳೂರು-11

ವೇದಪ್ರಿಯನೂ‌ಅಲ್ಲ ನಾದಪ್ರಿಯನೂ‌ಅಲ್ಲ ಭಕ್ತಿಪ್ರಿಯನು ನಮ್ಮ ಕೂಡಲ ಸಂಗಮದೇವ ಎಂದ ಬಸವಣ್ಣನವರು ; ಭಕ್ತಿ ಇಲ್ಲದೆ ಬಂಡಿಕಾಯಿಗಳೊಡೆಯೊಡೇನಹುದಯ್ಯ ಎಂದು ಪ್ರಶ್ನಿಸುತ್ತಾರೆ. ಹೀಗೆ ಭಕ್ತಿಯ ವಿಷಯದಲ್ಲಿ ಶಕ್ತಿಯುತವಾದ ಗಟ್ಟಿಮಾತುಗಳನ್ನೇ ಆಡಿರುವ ಬಸವಣ್ಣನವರು ತಮ್ಮ ಇಷ್ಟ ದೈವಕೂಡಲ ಸಂಗಮನಾಥನನ್ನು-ಭಕ್ತಿಯಿಂದ ಒಲಿಸಿಕೊಂಡು ಭಕ್ತಿಯ ಭಾಂಡಾರವೆನಿಸಿದರು. ಭಕ್ತಿ ಭಾಂಡಾರಿ ಬಸವಣ್ಣ ಎಂದೇ ಖ್ಯಾತನಾಮರಾದರು.

ಹಾಗೇ ಅವರು ಕೂಡಲ ಸಂಗಮನನ್ನು ಒಲಿಸಿಕೊಳ್ಳಲು ನಡೆಸಿದ ಹವಣಿಕೆ ಮಧ್ಯ ಮಧ್ಯದಲ್ಲಿ ಅನುಭವಿಸಿದ ಮಾನಸಿಕ ಯಾತನೆ ಬವಣೆಯನ್ನೆಲ್ಲ ಹೃದಯ ನಿವೇದನೆಯಲ್ಲಿ ತೋಡಿಕೊಂಡಿದ್ದಾರೆ. ಆ ಹೃದಯ ನಿವೇದನೆಯು ಇಂದು ಭಾವ ಗೀತೆಯ ಹೊನಲಾಗಿ ಅವರ ವಚನಗಳಲ್ಲಿ ತುಂಬಿ ಹರಿದಿದೆ.

ಭಕ್ತಿ ಎಂದರೇನು ಎಂಬ ವಿಷಯದಲ್ಲಿ ಪ್ರಾಜ್ಞ ಡಿವಿಜಿಯವರು ಕೊಡುವ ಈ ಒಂದು ವಿವರಣೆ, ಮಾಡಿರುವ ವ್ಯಾಖ್ಯಾನ, ಬೋಧಪ್ರದವಾಗಿದೆ : ಭಕ್ತಿ ಎಂದರೇನು ಎಂಬ ವಿಷಯದಲ್ಲಿ ಮಾತ್ರ ನಮ್ಮ ತಿಳಿವಳಿಕೆ, ಸರಿಯಾಗಿರಬೇಕು. ಭಕ್ತಿಯೆಂದರೆ ವಿಭೂತಿ, ಕುಂಕುಮ, ನಾಮ, ತುಲಸೀಸರ, ರುದ್ರಾಕ್ಷಿ, ತಾಯಿತಿ, ಚಕ್ರ, ತ್ರಿಶೂಲ ಹೀಗೆಂದು ಬಹುಜನರ ನಂಬಿಕೆ. ಯಾವಾಗಲೂ ರಾಮ ರಾಮ, ಶಿವ ಶಿವ ಎಂದು ನಾಮಸ್ಮರಣೆ ಮಾಡುತ್ತಿರುವುದೂ, ಶನಿವಾರ ಸೋಮವಾರ, ಭಜನೆ ಮಾಡುವುದೂ ಭಕ್ತಿಯ ಮುಖ್ಯ ಲಕ್ಷಣವೆಂದು ಬಹುಜನರ ನಂಬಿಕೆ, ತಿಳಿವಳಿಕೆ. ಆದರೆ ಭಕ್ತಿಗೆ ಅಷ್ಟು ಮಾತ್ರವೇ ಸಾಲದು, ನಾಮವಿಭೂತಿಗಳೂ ಜಪ-ಕೀರ್ತನೆಗಳೂ ಬೇಕಾದರೆ ಇದ್ದುಕೊಳ್ಳಲಿ. ಅವುಗಳಿಂದ ಕೆಲವರ ಮನಸ್ಸಿಗೆ ಒಂದು ಧೈರ್ಯವು ನೆಮ್ಮದಿಯೂ ಬರಬಹುದು. ಮನೆಗೆ ರಂಗವಲ್ಲಿ ತೋರಣಗಳಿಂದ ಒಂದು ಕಳೆ ಬರುವಂತೆ ನಮ್ಮ ಜೀವನಕ್ಕೆ ನಾಮಧಾರಣೆ, ಪೂಜೆ, ಭಜನೆಗಳಿಂದ ಒಂದು ಕಾಂತಿ ಬರಬಹುದು. ಆ ಅಲಂಕಾರಗಳು ಬೇಡವೆಂದು ಯಾರೂ ಹೇಳುವುದಿಲ್ಲ. ಆದರೆ ಬಾಗಿಲು ತೋರಣದಿಂದ ಹಬ್ಬವಾಗುವುದಿಲ್ಲ. ಒಳಗಡೆ ಹೂರಣದ ಊಟವೂ ಇರಬೇಕು. ಅಂದರೆ ಭಕ್ತಿಯಲ್ಲಿ ನಾಮಸಂಕೀರ್ತನೆಗಳ ಜೊತೆಗೆ ಅವಕ್ಕಿಂತ ಸಾಧ್ಯವಾದಷ್ಟು ಹೆಚ್ಚಾಗಿ, ವಿವೇಕದ ಕಾರ್ಯಗಳೂ ಸೇರಿರಬೇಕು. ಭಕ್ತಿಯೆಂಬುದು ಬರಿಯ ಮನಸ್ಸಿನ ತಳಮಳವಲ್ಲ. ಪುರುಷ ಶಕ್ತಿಯ ಪ್ರಯೋಗವೂ ಹೌದು. ಭಕ್ತಿಯೆಂಬುದು ಎದೆಯಿಂದ ಗಂಟಲಿನ ಮೂಲಕ ಹರಿದುಬರುವ

ಒಂದು ರಸ ಎಂಬುದು ಹಿಂದಿನ ಭಾವನೆ; ಭಕ್ತಿಯೆಂಬುದು ತಲೆಯಿಂದ ಕೈಗಳ ಮೂಲಕ ಹರಿದು ಬರುವ ಒಂದು ಶಕ್ತಿ ಎಂಬುದು ನಮ್ಮ ಭಾವನೆ. ಭಕ್ತಿಗೆ ಹೃದಯದಲ್ಲೊಂದು ಪೀಠವೆಂದು ಪೂರ್ವ ಭಾವನೆಗೆ ಭಕ್ತಿಯ ಒಂದು ಪಾದ ಹೃದಯದಲ್ಲಿ ಇನ್ನೊಂದು ಪಾದ ಬುದ್ಧಿಯಲ್ಲಿ ನಿಂತಿರುತ್ತದೆ ಎಂಬುದು ನಮ್ಮ ಭಾವನೆ. ಭಕ್ತಿ ದೇವರಿಗೆ ತಲುಪತಕ್ಕದ್ದೆಂದು ಪೂರ್ವ ಭಾವನೆ. ಅದು ದೇವರು ಸೃಷ್ಟಿಮಾಡಿರುವ ದೇವರ ಪ್ರತ್ಯಕ್ಷ ರೂಪವಾದ ಜೀವಲೋಕಕ್ಕೆ ತಲುಪಬೇಕಾದದ್ದೆಂದು ನಮ್ಮ ಭಾವನೆ. ಭಕ್ತಿಯು ಬರಿಯ ನಾಲ್ಕು ಒಳ್ಳೆಯ ಮಾತುಗಳನ್ನಾಡಿಸಿದರೆ ಸಾಲದು. ಅದು ಒಳ್ಳೆಯ ಕೆಲಸಗಳನ್ನೂ ಮಾಡಿಸಬೇಕು. ಮತ್ತು ಆ ಕೆಲಸಗಳ ಒಳ್ಳೆಯತನ ಲೋಕದ ಜೀವನಕ್ಕೆ ಉಪಯೋಗವಾಗಬೇಕು. ಇದು ನಮ್ಮ ಮತ. ನಮ್ಮ ಭಕ್ತಿಯಲ್ಲಿ ಪೌರುಷ ಮುಖ್ಯಾಂಶ. ಈ ದೃಷ್ಟಿಯಿಂದ ನೋಡಿದರೆ ಕನಕ, ಪುರಂದರ, ಕಬೀರ, ಬಸವಣ್ಣನವರು, ನಿಜಗುಣ ಶಿವಯೋಗಿಗಳು ಇಂಥ ದೈವ ಮಹಿಮಾ ಪ್ರಚಾರಕರು ಹೇಗೆ ಭಕ್ತರೋ ಹಾಗೆಯೇ ಕೆಂಪೇಗೌಡರು, ದಾದಾ ಬಾಯಿನವರೋಜಿ, ರ್‍ಯಾನಡೆ, ದಿವಾನ್ ರಂಗಾಚಾರ್ಲು, ಗೋಖಲೆ, ತಿಲಕರು, ಗಾಂಧಿಯವರಂತ ರಾಜನೀತಿಜ್ಞರು ಹಾಗೂ ತತ್ವಜ್ಞಾನಿಗಳು, ಹಾಗೂ ಜಗದೀಶ್ ಚಂದ್ರ ಬೋಸ್, ಪಿ.ಸಿ.ರೇ. ಜಿ.ಎನ್. ತಾತಾ ಅವರು ಇಂಥಾ ಮಾನುಷ ಲೋಕೋಪಕಾರಿಗಳೂ ಭಕ್ತರು.

ಇವರು ದೇಶದ ಸರ್ಕಾರದ, ವಿಚಕ್ಷಣೆಯನ್ನು ಉತ್ತಮ ಪಡಿಸಿದವರು. ಜನರ ಬಡತನಕ್ಕೆ ಕಾರಣವನ್ನೂ ಕಂಡುಕೊಂಡು ಹೋಗಲಾಡಿಸಲು ಶ್ರಮಿಸಿದವರು. ದೇಶದಲ್ಲಿ ವಿದ್ಯಾ ಜ್ಞಾನವನ್ನು ಹರಡಿದವರು. ಹೊಸ ಹೊಸ ಶಾಸ್ತ್ರ ಸಂಶೋಧನೆಗಳನ್ನು ನಡೆಸಿದವರು. ಹೊಸ ಯಂತ್ರ ಸಾಧನಗಳನ್ನು ಕಂಡುಹಿಡಿದು, ಜನಕ್ಕೆ ಜೀವನೋಪಾಯವನ್ನು ಕಲ್ಪಿಸಿದವರು. ಇವರೆಲ್ಲ ಭಗವದ್ಭಕ್ತರೇ. ಒಬ್ಬರದು ಕಣ್ಣೀರಿನ ಭಕ್ತಿಯಾದರೆ, ಇನ್ನೊಬ್ಬರದು ಗಟ್ಟಿ ಕಟ್ಟಡದ ಭಕ್ತಿ.

ಹೀಗೆ "ಭಕ್ತಿ"ಯನ್ನು ಕುರಿತು ಡಿ.ವಿ.ಜಿ.ಯವರು ತಮ್ಮ ಚೊಕ್ಕ-ಚಿಕ್ಕ ಕೃತಿ 'ಬಾಳಿಗೊಂದು 'ನಂಬಿಕೆ'ಯಲ್ಲಿ ಅರ್ಥಪೂರ್ಣವಾದ ಚಿಂತನೆಯನ್ನು ನಡೆಸಿದ್ದಾರೆ. ಭಕ್ತಿಯ ಬಗೆಗೆ ಬೇರೂರಿರುವ ಹಳತು-ಹೊಸತರ ಸುಂದರ ಸಮನ್ವಯವನ್ನು ತೋರಿಸಿದ್ದಾರೆ. ನಮಗೆ ಇಂದು ಬೇಕಾಗಿರುವುದೇ ಇಂತಹ-ಪ್ರಾಜ್ಞರ-ಹಳತು-ಹೊಸದರ ಸಮನ್ವಯ ದೃಷ್ಟಿ.



# ಧೈರ್ಯ (ಚಿಂತನ)

—ಸಿದ್ಧರಾಮ ಹೊನ್ಕಲ್, ಹೊಸದಿಕ್ಕು, ದಿಗ್ಗಿ ಕಟ್ಟಡ, ಶಹಾಪುರ-585223

ಆಗದು ನೀಗದು ಎಂಬುದರ ಉಸುರಿನಲ್ಲಿಯೇ ಆಗುವದು ಹೋಗುವದು ಎಂಬುದರ ಅಂಕುರಗಳಿವೆ ಎನ್ನುತ್ತಾರೆ ಶ್ರೀ ಅರವಿಂದರು. ಅವರು ಧೈರ್ಯವನ್ನು ಕುರಿತು ಹೇಳುತ್ತಾ ಯಾವುದೇ ಕೆಲಸ ನಮ್ಮಿಂದ ಆಗದು ಮತ್ತು ನಾನು ಮಾಡಲು ಸಮರ್ಥನೆ ಎಂದು ಯೋಚಿಸುವ ಸ್ಥಿತಿಯಲ್ಲಿಯೇ ಆ ಕೆಲಸ ಆಗುವುದು ಅಥವಾ ಆಗದಿರುವದರ ಅಂಕುರವಿದೆ ಎನ್ನುತ್ತಾರೆ. ನನ್ನಿಂದ ಈ ಕೆಲಸ ಆಗಬಲ್ಲುದು ಎಂಬ ಆತ್ಮ ವಿಶ್ವಾಸ ಮತ್ತು ಧೈರ್ಯ ವ್ಯಕ್ತಿಯೊಬ್ಬನಲ್ಲಿ ಬಂದರೆ ಖಂಡಿತವಾಗಿಯು ಆ ಕೆಲಸವನ್ನು ಅವನು ಮಾಡಬಲ್ಲ. ಅದುಬಿಟ್ಟು ಈ ಕೆಲಸ ನನ್ನಿಂದ ಆಗಲಾರದೇನೋ ಎಂಬ ಅಳುಕು ಹೊಂದಿದ ವ್ಯಕ್ತಿಗೆ ಖಂಡಿತ ಆ ಕೆಲಸ ಆಗುವುದೇ ಇಲ್ಲ.

ಎರಡು ದಂಡೆಗಳನ್ನು ದೂರದಲ್ಲಿ ನೋಡಿ ಹೆದರಿ ಪೇಚಿನಲ್ಲಿ ಮುಳುಗುವುದಕ್ಕಿಂತ ಕೈಸೋಲುವವರೆಗೆ ಈಜಿ ದಡ ಸೇರಲು ಹೋರಾಟ ಮಾಡುವವನೇ ಧೈರ್ಯವಂತನೆನಿಸಿಕೊಳ್ಳುತ್ತಾನೆ. ತುಂಬಿದ ಪ್ರವಾಹದ ಮಧ್ಯೆ ಸಿಕ್ಕಿಬಿದ್ದ ವ್ಯಕ್ತಿ ಆ ನದಿಯ ಎರಡು ದಡಗಳನ್ನು ನೋಡಿ 'ಇಷ್ಟು ದೂರ ಈ ಪ್ರವಾಹದ ಮಧ್ಯೆ ನಾನು ಈಜಲಾರೆ ಎಂದುಕೊಂಡು ಕೈಚೆಲ್ಲಿದರೆ ಮುಳುಗಿ ಸಾಯುತ್ತಾನೆ. ಅದೇ ಆ ವ್ಯಕ್ತಿ ಧೈರ್ಯಮಾಡಿ ಇದ್ದುದರಲ್ಲೆ ಪ್ರಯತ್ನವಾದಿಯಾಗಿ ಧೈರ್ಯದಿಂದ ಆದಷ್ಟು ಪ್ರಯತ್ನಿಸೋಣವೆಂದು ಈಜಲು ತೊಡಗಿದರೆ ದಡ ತಲುಪಿ ಬದುಕಿಬಾಳಬಲ್ಲ. ಸಾಯುವುದಂತು ಖಂಡಿತವಿರುತ್ತದೆ. ಬದುಕಿಗಾಗಿ ಧೈರ್ಯದಿಂದ ಪ್ರಯತ್ನಿಸುವುದರಲ್ಲಿಯೇ ಅರ್ಥವಿದೆ. ಯಾವುದೇ ಕೆಲಸದ ಬಗ್ಗೆ ಮೊದಲು ಪರಿಚಯವಿರುವುದಿಲ್ಲ. ಅನುಭವವಾದಂತೆ ಧೈರ್ಯ ಹಾಗು ಆತ್ಮ ವಿಶ್ವಾಸ ತಾನಾಗಿ ಬರುತ್ತದೆ. ಈ ಕೆಲಸ ಮಾಡಿದರೆತಪ್ಪೊ ಸರಿಯೋ ಮಾಡಬೇಕೊ ಮಾಡಬಾರದೋ ಎಂದು ಯೋಚಿಸಿ ತೊಡಗಬೇಕು. ಆ ನಂತರವು ಸಹ ತಪ್ಪಾದರೆ, ಅದನ್ನು ತಿದ್ದಿಕೊಂಡು ಮುಂದಡಿ ಇಡುವವನು ಮಾತ್ರ ಬದುಕಿನಲ್ಲಿ ಮುಂದೆ ಬರಲು ಸಾಧ್ಯವಾಗುತ್ತದೆ.

ನಾನು ಮಾಡಿಯೇ ತೀರುತ್ತೇನೆ ಎಂಬ ಆತ್ಮ ವಿಶ್ವಾಸ ಧೈರ್ಯಗಳೇ ಮನುಷ್ಯನನ್ನು ಜೀವನದಲ್ಲಿ ಮೇಲೆತ್ತ ಬಲ್ಲವು. ಈ ಕರ್ತವ್ಯ ನಿರ್ವಹಣೆಯ ಬಗೆಗಿನ ಕಾಳಜಿಯೇ ವ್ಯಕ್ತಿಗೆ ವಿಶಿಷ್ಟ ಗೌರವ ತರಬಲ್ಲದು. ಜನರು ಮೆಚ್ಚುವಂತಹ ವ್ಯಕ್ತಿತ್ವ ನನ್ನಲ್ಲಿಲ್ಲವೆಂದು ಕಾದುಕುಳಿತರೆ ಆ ವ್ಯಕ್ತಿತ್ವ ತಾನಾಗಿ ವ್ಯಕ್ತಿಯಬಳಿ ಬಂದು ಕೂಡಿಕೊಳ್ಳುವುದಿಲ್ಲ. ಅದಕ್ಕಾಗಿ ಜನಪರ ಪ್ರೀತಿ, ನಂಬಿಕೆ, ವಿಶ್ವಾಸ ಕಾಳಜಿಯಿಂದ ಸಹಬಾಳ್ವೆ-

ಯಲ್ಲಿ ತೊಡಗಬೇಕಾಗುತ್ತದೆ. ತನ್ನ ಕುಟುಂಬ, ಸಮಾಜ, ಪರಿಸರ ನಾಡು-ನುಡಿ ಹೀಗೆ ಹಬ್ಬುವ ಬಾಂಧ್ಯವ್ಯದ ಬಳ್ಳಿಯನ್ನು ತಬ್ಬಿಕೊಂಡಷ್ಟು ವ್ಯಕ್ತಿಯ ವ್ಯಕ್ತಿತ್ವ ವಿಕಾಸಗೊಳ್ಳುತ್ತಾ ಹೋಗುತ್ತದೆ. ದಿಟ್ಟತನದಿಂದ ಸಾರ್ವಜನಿಕ ಹಿತ ಚಿಂತನೆಯನ್ನು ಗಮನದಲ್ಲಿಟ್ಟು ಕೊಂಡು ಹೊರಡುವ ವ್ಯಕ್ತಿಗೆ ಧೈರ್ಯ ತನ್ನಷ್ಟಕ್ಕೆ ತಾನೇ ಬರುತ್ತದೆ.

ನಾನು ಸರಿ ದಾರಿಯಲ್ಲಿ ನಡೆಯುತ್ತಿದ್ದೇನೆ. ನಾನು ನಡೆವ ಈ ದಾರಿಯಲ್ಲಿ ಸ್ವಾರ್ಥವಿಲ್ಲ. ಇತರರಿಗೆ ಹಾನಿಯಿಲ್ಲ, ಎಂಬ ನಂಬಿಕೆ-ಆತ್ಮ ವಿಶ್ವಾಸವುಳ್ಳ ವ್ಯಕ್ತಿ ಪರನಿಂದೆ-ಕಟಕಿಗಳಿಗೆ ಕಿವಿಯೊಡ್ಡದೇ ಮುನ್ನುಗ್ಗಬೇಕು. ನಮ್ಮ ಆತ್ಮಸಾಕ್ಷಿ ನಾವು ಹೊರಟದಾರಿ ಸರಿಯಿಲ್ಲ ಎಂದು ಎಚ್ಚರಿಸಿದ ಕ್ಷಣವೇ ನಮ್ಮ ಮುಂದಿನ ಹೆಜ್ಜೆಯನ್ನು ಹಿಂತೆಗೆದುಕೊಂಡು ಸರಿದಾರಿಯಲ್ಲಿ ನಡೆಯಲು ಆಲೋಚಿಸಿ ಮುನ್ನಡೆಯಬೇಕು. ನಾವು ಒಂದು ಉದ್ದೇಶಿತ ಗುರಿಯಿಂದ ನಿಶ್ಚಿತವಾದ ಹೆಜ್ಜೆ ಹಾಕುತ್ತಲಿದ್ದರೆ ಖಂಡಿತ ತಲುಪಬೇಕಾದಲ್ಲಿಗೆ ತಲುಪಿಯೇ ತಲುಪುತ್ತೇವೆ.

ದೆವ್ವ ಭೂತಗಳ ಅಂಜಿಕೆ ಇಲ್ಲದವನಿಗೆ ಕರಾಳ ರಾತ್ರಿಯು ಕೂಡಾ ಯಾವ ಭಯ ಹುಟ್ಟಿಸುವುದಿಲ್ಲ. ಹಾಗೆಯೇ ಪ್ರೀತಿ-ಸಮಾನತೆ-ಸತ್ಯ-ಮಾನವೀಯ ಮೌಲ್ಯಗಳಿಗೆ ಬೆಲೆ ಕೊಡುವ ವ್ಯಕ್ತಿ ಬದುಕು ಪೂರ್ತಿ ಆನಂದದಿಂದ ಬಾಳಬೇಕು ಹಾಗೇ ಸಾಹಸದಿಂದಲೇ ಸಾವನ್ನೆದುರಿಸಬೇಕು. ಅಂಜುಕುಳಿ ನಿಂತ ನೆಲವೇ ಅವನನ್ನು ನುಂಗಬಲ್ಲದು. ಹಾಗಾಗಿ ದೃಢವಿಶ್ವಾಸ ಶಾಂತ ಮನಸ್ಥಿತಿ-ಧೈರ್ಯಗಳುಳ್ಳ ವ್ಯಕ್ತಿ ನಡೆವ ದಾರಿಯಲ್ಲಿ ಲಕ್ಷಾಂತರ ಮುಳ್ಳುಗಳಿದ್ದರೂ ತುಳಿದು-ಮೆಟ್ಟಿ ಮುಂದೆ ಸಾಗಬಲ್ಲ.

"ಮೊಣಕಾಲೂರಿ ಬದುಕಿ ಇರುವುದಕ್ಕಿಂತ ಕಾಲಮೇಲೆ ನಿಂತು ಸಾಯುವುದು ಲೇಸು" ಎನ್ನುತ್ತಾನೆ ರೂಜವೆಲ್ಟ. ಇದು ಪ್ರತಿಯೊಬ್ಬನ ಮನಸ್ಸಿನಲ್ಲಿ ಮೊಳಕೆಯೊಡೆಯಬೇಕು. ಹೂ.... ಮೊಗ್ಗು ಕಾಯಿ. ಹಣ್ಣಾಗಿ ಬೆಳೆಯಬೇಕು. ಸ್ವಾಭಿಮಾನ ಆತ್ಮಗೌರವಗಳ ಕಾಳಜಿವುಳ್ಳ ವ್ಯಕ್ತಿಗೆ ಧೈರ್ಯ ಹುಡುಕಿಕೊಂಡು ಬಂದು ಮನೆಮಾಡುತ್ತದೆ.

ಸಿದ್ಧಗಂಗಾ

# ಕಲ್ಯಾಣ

-ಸುಬ್ಬಣ್ಣ ಅಂಬೆಸಂಗೆ "ಕೃಪೆ ಆಕಾಶವಾಣಿ" ಗುಲ್ಬರ್ಗ.

"ಕಲ್ಯಾಣ" ಎಂದರೆ ಒಳಿತು, ಶುಭ, ಮಂಗಳ ಎಂದರ್ಥ. 'ಕಲ್ಯ, ಎಂದರೆ ಬೆಳಗಿನಜಾವ. 'ಅಣಿ' ಎಂದರೆ ಉತ್ಕೃಷ್ಟವಾದುದು. ಇಂಥ ಉತ್ತಮವಾದ ಹೆಸರನ್ನು ಪಡೆದ ಪಟ್ಟಣ ಕರ್ನಾಟಕದ ಬೀದರ ಜಿಲ್ಲೆಯಲ್ಲಿದೆ. ಆದಕ್ಕೆ "ಬಸವ ಕಲ್ಯಾಣ" ಎಂದು ಕರೆಯುತ್ತಾರೆ. ಈ "ಕಲ್ಯಾಣ" ಎಂಬ ಹೆಸರು ಕನ್ನಡ ನಾಡು, ಭಾರತ ದೇಶಕಷ್ಟೇ ಗೊತ್ತಿಲ್ಲ. ಇಡೀ ಪ್ರಪಂಚಕ್ಕೂ ಈ ಹೆಸರು ಪರಿಚಿತವಿದೆ. ಏಕೆಂದರೆ ಈ ಕಲ್ಯಾಣಕ್ಕೆ ಒಂದು ಒಳ್ಳೆ ಇತಿಹಾಸವಿದೆ. ಚಾಲುಕ್ಯ, ಕಲಚೂರಿಗಳಂಥ ಸಾಮ್ರಾಜ್ಯಗಳ ರಾಜಧಾನಿಗಳನ್ನೂ ಮೀರಿ ವರ್ಗ, ವರ್ಣ, ಲಿಂಗಭೇದ ರಹಿತ ಸಾಮ್ರಾಜ್ಯವನ್ನು ಕಟ್ಟಲು ಆತ್ಮ ಕಲ್ಯಾಣ, ಜನಕಲ್ಯಾಣಕ್ಕಾಗಿ ಶಿವಶರಣರು ಶ್ರಮಿಸಿದ ಉತ್ತಮ ಚರಿತ್ರೆ ಈ ಕಲ್ಯಾಣಕ್ಕಿದೆ. ಆದರೆ ಈ ಕಲ್ಯಾಣದ ವೈಭವ ಹಾಳಾದುದ್ದು ಹೇಗೆ? ಇದನ್ನು ನೆನೆಸಿದರೆ ಕಳವಳ ವೆನಿಸುತ್ತದೆ, ಕಲ್ಯಾಣದ ಇತಿಹಾಸ ನೆನಪಿಗೆ ಬರುತ್ತದೆ.

ಕಲ್ಯಾಣ ಹುಟ್ಟಿದುದು ಸಾವಿರಾರು ವರ್ಷಗಳಹಿಂದೆ ಎಂಟುನೂರು ವರ್ಷಗಳ ಹಿಂದೆ ಬೆಳಗಿದ ಬಸವಣ್ಣನನ್ನುದ್ದೇಶಿಸಿ ಹೇಳುವ ಜನಪದ ಹಾಡೊಂದು ಹೀಗಿದೆ.

ಕಲ್ಯಾಣ ಹುಟ್ಟಿದಾಗ ಎಲ್ಲಿದ್ಯೋ ಬಸವಣ್ಣ
ಹಳ್ಳಿ ಮಂಚೋಳ ತಿಪುರಾಂತೋ-ಕೇರಿಮ್ಯಾಲ
ನಾಡ ಪಟ್ಟಣ ಬೆಳಗಾಗೋ,

ಬಸವಣ್ಣನಿಗಿಂತಲೂ ಪೂರ್ವದಲ್ಲಿಯೇ ಕಲ್ಯಾಣವೆಂಬ ಮಂಗಳ ಹೆಸರನ್ನು ಪಡೆದು ಈ ಪಟ್ಟಣ ಹುಟ್ಟಿತ್ತು. ಪಟ್ಟಣದಲ್ಲಿ ಬೆಳಗಾವಿ, ಬದುಕು ಹಸನಾಗಿತ್ತು. ಸುಮಾರು ಕ್ರಿ. ಶ. 22, ಅಂದರೆ ಹತ್ತನೇ ಶತಮಾನದಲ್ಲಿ ಬಾದಾಮಿ ಚಾಲುಕ್ಯರ ೪ನೇ ವಿಕ್ರಮಾದಿತ್ಯನ ಮಗ ೨ನೇ ತೈಲಪನು ರಾಷ್ಟ್ರಕೂಟರ ೨ನೇ ಕರ್ಕನನ್ನು ಸೋಲಿಸಿ ಕಲ್ಯಾಣದ ಚಾಲುಕ್ಯ ಶಾಖೆಯನ್ನು ಸ್ಥಾಪಿಸಿದನು ಮತ್ತು ಕಲ್ಯಾಣವೇ ರಾಜಧಾನಿಯನ್ನಾಗಿ ಮಾಡಿದ್ದನು ಇವನ ಆಸ್ಥಾನದಲ್ಲಿಯೇ "ಸಾಹಸಭೀಮ ವಿಜಯ" ವಿರಚಿತ ಮಹಾಕವಿ ರನ್ನ ಇದ್ದುದು. ಆಮೇಲೆ ಇಲ್ಲಿ ಸತ್ಯಾಶ್ರಯ, ಸೋಮೇಶ್ವರ, ಅಹವಮಲ್ಲ ಜಗದೇಕ ಮಲ್ಲ ಜಯಸಿಂಹ ಮುಂತಾದ ಚಾಲುಕ್ಯ ಅರಸರು ಆಳಿದರು. ೬ನೇ ವಿಕ್ರಮಾದಿತ್ಯನ ಕಾಲದಲ್ಲಿ ಕರ್ನಾಟಕವು ವೈಭವದ ಶಿಖರವನ್ನೇ ಏರಿತು. ಇವನು "ತ್ರಿಭುವನ ಮಲ್ಲ" ಎಂಬ ಬಿರುದೂ ಪಡೆದಿದ್ದ. ವಿಕ್ರಮ ಶಕೆಯನ್ನು ಪ್ರಾರಂಭಿಸಿದ, ಈತ



[ಸೈನಿ]ಕೀಯ, ಸಾಹಿತ್ಯ, ಸಂಸ್ಕೃತಿ ಇತ್ಯಾದಿ ರಂಗಗಳಲ್ಲೂ ಅಖಿಲ ಭಾರತ ಮಟ್ಟಕ್ಕೇರಿದ. ಅನೇಕ ದೇವಾಲಯಗಳನ್ನು ಕಟ್ಟಿಸಿದ. ಚೋಳರನ್ನು ಅನೇಕ ಬಾರಿ ಸೋಲಿಸಿದ. ಮಾಳವದ ದೊರೆಗೆ ರಾಜ್ಯವನ್ನು ಸಂಪಾದಿಸಿಕೊಟ್ಟ. ಉತ್ತರದಲ್ಲಿ ಬಂಗಾಳ, ಅಸ್ಸಾಂ, ನೇಪಾಳದವರೆಗೂ, ದಕ್ಷಿಣದಲ್ಲಿ ಸಿಂಹಳ ದ್ವೀಪದವರೆಗೂ ದಿಗ್ವಿಜಯವನ್ನು ಪಡೆದು ಇಡಿ ಭಾರತದಲ್ಲಿಯೇ ಏಕೈಕ ಚಕ್ರವರ್ತಿಯಾಗಿ ಮೆರೆದಿದ್ದ. ಆವನ ಕೀರ್ತಿಯನ್ನು ಕೇಳಿ ಕಾಶ್ಮಿರದ ಸಂಸ್ಕೃತ ಕವಿ ಬಿಲ್ಲಣನು ಇವನ ಆಸ್ಥಾನಕ್ಕೆಬಂದು ನೆಲೆಸಿದ್ದ. ವಿಕ್ರಮನ ಆಸ್ಥಾನವನ್ನು ಅಲಂಕರಿಸಿದ. ಇನ್ನೊಬ್ಬ ಮಹಾ ವಿದ್ವಾಂಸ ವಿಜ್ಞಾನೇಶ್ವರ. ಇವನ "ಮಿತಾಕ್ಷರ" ಎಂಬ ಗ್ರಂಥ ಪ್ರಸಿದ್ಧವಾದುದ್ದು. ವಿಕ್ರಮನ ನಂತರ 2ನೇ ಸೋಮೇಶ್ವರನು ಅಧಿಕಾರಕ್ಕೆ ಬಂದು ತ್ರಿಭುವನ ಮಲ್ಲ, ಭೂಲೋಕ ಮಲ್ಲ, ಸರ್ವಜ್ಞ, ಸರ್ವಜ್ಞ ಚಕ್ರವರ್ತಿ, ಭೂಪ ಎಂಬ ಬಿರುದುಗಳು ಪಡೆದಿದ್ದ ಇವನು ರಾಜಕಾರಣಿ, ತರ್ಕ, ಕಾವ್ಯ, ವ್ಯಾಕರಣ, ಸಂಗೀತ, ಜೋತಿಷ್ಯ, ವೈದ್ಯಕೀಯ, ಆನೆಗಳ ಶಿಕ್ಷಣ, ಹುಂಜಗಳ ಕಾದಾಟ, ಇತ್ಯಾದಿ ನೂರಾರು ವಿಷಯಗಳನ್ನೊಳಗೊಂಡ "ಮಾನಸೋಲ್ಲಾಸ" ಎಂಬ ಗ್ರಂಥವನ್ನು ರಚಿಸಿದ, ಹೀಗೆಯೇ ಕಲ್ಯಾಣದ ಚಾಲುಕ್ಯರು ಸಾಹಿತ್ಯಕ್ಕೂ, ಕವಿಗಳಿಗೂ ಅಪಾರ ಮಹತ್ವವನ್ನು ನೀಡಿದ್ದರು, ಇವರ ಆಸ್ಥಾನಗಳಲ್ಲಿಯೇ ಪಂಪ, ೨ನೇ ನಾಗವರ್ಮ, ದುರ್ಗಸಿಂಹ, ಚಂದ್ರರಾಜ, ಶ್ರೀಧರಾಚಾರ್ಯ, ನಾಗವರ್ಮಚಾರ್ಯ, ಬ್ರಹ್ಮಶಿವ, ಶಾಂತಿನಾಥ, ಮುಂತಾದ ಮಹಾಕವಿಗಳು ದಿವ್ಯ ಸಾಹಿತ್ಯದ ನಿರ್ಮಾಣ ಮಾಡಿದ್ದರು. ಕಲೆ, ವಾಸ್ತುಶಿಲ್ಪ, ಶಿಲ್ಪಕಲೆ ಚಿತ್ರಕಲೆ, ಸಂಗೀತಕಲೆ, ಇತ್ಯಾದಿಗಳು ಇವರ ನೇತೃತ್ವದಲ್ಲಿಯೇ ಉತ್ಕೃಷ್ಟತೆಯನ್ನು ಪಡೆದವು. ಲಕ್ಕುಂಡಿ, ಗದಗು, ಡಂಬಳ, ಕುರುವತ್ತಿ, ಇಟ್ಟಗಿ, ಇತ್ಯಾದಿ ಹಲವಾರು ಕಡೆಗಳಲ್ಲಿ ಇವರು ದೇವಾಲಯಗಳನ್ನು ನಿರ್ಮಿಸಿದರು. ಹೀಗೆ ಹಲವಾರು ಬಗೆಗಳಲ್ಲಿ ಕರ್ನಾಟಕಕ್ಕೆ ಶಾಶ್ವತ ಸಂಪತನ್ನು ಕಲ್ಯಾಣದ ವಂಶಾವಳಿಯೇ ಸಾಧಿಸಿ ಕೊಟ್ಟಿದೆ.

ಧರ್ಮಸಮನ್ವಯ, ಭಾವೈಕ್ಯತೆಯನ್ನು ನಿರ್ಮಿಸಲು ಪ್ರಯತ್ನಿಸಿದ ರಾಷ್ಟ್ರಕೂಟರ ಜೈನ ಅರಸು ಅಮೋಘವರ್ಷನ ಪರಂಪರೆಯೂ ಕಲ್ಯಾಣದಲ್ಲಿತ್ತು. ಸುಮಾರು ಕಿ. ಶ. ೧೦೫೫ ರಲ್ಲಿ ಹೊಯ್ಸಳದ ರಾಣಿಯೋರ್ವಳೂ ಇಲ್ಲಿ ಆಳಿದ್ದಳು ಕಲಚೂರ್ಯ ಬಿಜ್ಜಳನ ಆಳ್ವಿಕೆಯೂ ಇಲ್ಲಿದ್ದು ಅವನ ಕಾಲದಲ್ಲಿಯೇ ಕಲ್ಯಾಣ ಕ್ರಾಂತಿಯಾದದ್ದು ಸರ್ವವಿದಿತ ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಸೇವುಣರು, ಕಲಚೂರ್ಯರು, ವಿಜಯನಗರ, ಇತ್ಯಾದಿ ಅರಸರು ಆಳಿ ಮೆರೆದ ನಾಡು ಕಲ್ಯಾಣ.

ಈ ಕಲ್ಯಾಣಕ್ಕೆ ಬಸವಣ್ಣ ಬಂದಾಗ ಕಲ್ಯಾಣ ಕೈಲಾಸವಾಯಿತು. ಭಕ್ತಿ, ಜ್ಞಾನಗಳ ತವರೂರಾಯಿತು. ಅದು ತನ್ನ ಶಿಖರವನ್ನೇ ತಲುಪಿತು. ಬಿಜ್ಜಳನ ಕಾರಣಿತನಾಗಿ, ಮಹಾಮಂತ್ರಿಯಾಗಿ ಬಸವಣ್ಣ ಮಾಡಿದ ಕಾರ್ಯ ಅಸಾಮಾನ್ಯ.

ಅವನ ವಚನ ಸಾಹಿತ್ಯದಿಂದಾಗಿ ಕಲ್ಯಾಣಕ್ಕೆ ಶಶಿ ಉದಿಸಿದಂತಾಯಿತು. ಬಸವಣ್ಣ ಜಗಜ್ಯೋತಿಯಾದ. ಇತಿಹಾಸದ ಪುಟಗಳಲ್ಲಿ ಬಸವಣ್ಣನು ಜೊತೆಗೆ ಕಲ್ಯಾಣದ ಹೆಸರೂ ಸುವರ್ಣಾಕ್ಷರಗಳಿಂದ ಬರೆಯುವಂತಾಯಿತು. ಅನುಭವ ಮಂಟಪದ ಅಧ್ಯಕ್ಷನೂ, ಶೂನ್ಯ ಸಿಂಹಾಸನದ ದೊರೆಯು ಆದ ಮಹಾಜ್ಞಾನಿ ಅಲ್ಲಮಪ್ರಭು ಇದ್ದುದ್ದು ಇದೇ ಪಟ್ಟಣದಲ್ಲಿ. ಮಾನವ ಬದುಕು, ಮಹಿಳಾ ಜೀವನ, ಆಧ್ಯಾತ್ಮ ಭಾವನೆಗಳನ್ನೊಳಗೊಂಡ ಅಮೂಲ್ಯ ವಚನ ಸಾಹಿತ್ಯದ ಸೌಗಂಧವನ್ನು ಹರಡಿಸಿದ ಅಕ್ಕಮಹಾದೇವಿ ಕೌಶಿಕನ ಕೆಟ್ಟ ಕಣ್ಣುಗಳಿಂದ ತಪ್ಪಿಸಿಕೊಂಡು ಬಂದುದ್ದು ಇದೇ ಪಟ್ಟಣಕ್ಕೆ. ಅಲ್ಲಮಪ್ರಭು, ಬಸವಣ್ಣ ಚನ್ನಬಸವಣ್ಣ, ಸಿದ್ಧರಾಮ, ಮೋಳಿಗೆ ಮಾರಯ್ಯ ಮುಂತಾದ ಶರಣರೂ ಇಲ್ಲಿಯೇ ನೆಲಸಿದ್ದರು. ಅಕ್ಕಮಹಾದೇವಿ, ಮಹಾದೇವಿ, ಬಜ್ಜಳದೇವಿ, ನೀಲಮ್ಮ, ಗಂಗಮ್ಮ, ಮುಕ್ತಾಯಕ್ಕ, ಸತ್ಯಕ್ಕ ನೀಲಾಂಬಿಕೆ, ನಾಗಲಾಂಬಿಕೆ ಮುಂತಾದ ಶಿವಶರಣೆಯರೂ ಇಲ್ಲಿಯೇ ಇದ್ದರು. ಅಂದು ಇವರೆಲ್ಲ ನೆಲಸಿದ್ದು ಕಿರಣ ಸಮೂಹದಂತೆ, ತೇಜಃಪುಂಜದಂತೆ. ಅವರ ಪ್ರಖರವಾದ ವಚನ(ವಾಙ್ಮಯ ಸುತ್ತೆಲ್ಲ ದೂರದೂರದವರೆಗೂ ರವಿಪ್ರಕಾಶ ಹರಡಿಸಿತು. ಪದ್ಮಣಾಂತನ ಪದ್ಮರಾಜ ಪುರಾಣದಲ್ಲಿ,

> ಇನ್ನುಂ ಧರಣಿಯೊಳ್ಕೈವತ್ತು ಬರಿಸದ ವರ್ತ |
> ನಂ ನೆರೆವುದದನೆಮ್ಮ ಬಸವಾದಿಗಳ್ ಭಕ್ತಿ |
> ಯಂ ನಿಲಿಸಲೆಂದು ಕಲ್ಯಾಣದೋಳ್
> ಪಂದಿರ್ಪರವರೊಡನೆ ಕಳೆಯೆಂದೆನೆ ||

ಎಂಬ ಅವತರಣಿಕೆಗಳನ್ನು ನೋಡಿದರೆ ಬಸವಣ್ಣನ ಜೊತೆ ಕಲ್ಯಾಣದಲ್ಲಿ ೫೦ ವರ್ಷಗಳ ಕಾಲ ಹೋಗಿ ಇರಬೇಕೆಂದು ಮಾದರಸನಿಗೆ ಮಲ್ಲರಸನ ಆದೇಶವಾಯಿತೆಂಬುದು ಸ್ಪಷ್ಟವಾಗುತ್ತದೆ ಆದರೆ 'ಅಯ್ಯಾ, ಭಕ್ತಿಗೆ ಬೀಡಾದುದು ಕಲ್ಯಾಣ, ಮುವ್ವತ್ತಾರು ವರುಷ' ಎಂದು ಬಸವಣ್ಣನವರು ಹೇಳಿದ್ದಾರೆ. ಹೀಗೆ ಮುವ್ವತ್ತಾರು ವರುಷವಾದರೂ ಕಲ್ಯಾಣಕ್ಕೆ ಒಂದು ಸುವರ್ಣಯುಗ. ಪ್ರಭುವೇವರು ಕಲ್ಯಾಣದ ವಿಷಯವಾಗಿ ಹೀಗೆ ಹೇಳಿದ್ದಾರೆ.

> ಕಲ್ಯಾಣವೆಂಬ ಪ್ರಣತಿಯಲ್ಲಿ ಭಕ್ತಿರಸವೆಂಬ ತೈಲವನೆರೆದು
> ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು
> ತೊಳಗಿ ಬೆಳಗುತಿರ್ದುದಯ್ಯ ಶಿವಪ್ರಕಾಶ ! ಆ ಬೆಳಗಿ
> ನೊಳಗೆ ಒಪ್ಪುತಿರ್ದುದಯ್ಯ ಅಸಂಖ್ಯಾತ ಭಕ್ತ ಮಹಾಗಣಂ
> ಗಳು, ಶಿವಭಕ್ತರಿರ್ದ ಕ್ಷೇತ್ರ, ಅವಿಮುಕ್ತ ಕ್ಷೇತ್ರವೆಂಬುದು
> ಹುಸಿಯೇ ? ಶಿವಭಕ್ತರಿರ್ದ ದೇಶ ಪಾವನವೆಂಬುದು ಹುಸಿಯೇ ?



ಹೀಗೆ ಇಲ್ಲಿ ಕಲ್ಯಾಣ ಕ್ಷೇತ್ರವು ಮಹತ್ವದ ಕ್ಷೇತ್ರವೆಂಬುದು ಮಹಾಜ್ಞಾನಿ ಪ್ರಭುದೇವರೇ ಹೊಗಳಿ ಹೇಳಿದ್ದಾರೆ. ಮಹಾದೇವಿಯಕ್ಕನೂ ಕಲ್ಯಾಣದ ವಿಷಯವಾಗಿ ಹೇಳಿದ್ದಾಳೆ.

> ಕಲ್ಯಾಣವೆಂಬುದಿನ್ನಾರಿಗೂ ಹೋಗಬಾರದು ಅಸಾಧ್ಯವಯ್ಯ
> ಆಶೆ ಆಮಿಷವನಳಿದವರಿಗಲ್ಲದೇ ಕಲ್ಯಾಣದತ್ತಲಡಿಯಿಡಬಾರದು
> ಒಳಹೊರಗೂ ಶುದ್ಧವಾದವರಿಗಲ್ಲದೆ ಕಲ್ಯಾಣವ ಹೋಗಬಾರದು
> ನಾನೆಂಬುದ ಹರಿದವರಿಗಲ್ಲದೆ ಕಲ್ಯಾಣವ ಹೋಗಬಾರದು
> ಚನ್ನಮಲ್ಲಿಕಾರ್ಜುನಂಗೊಲಿದು ಉಭಯ ಲಜ್ಜೆಯಳಿದೆನಾಗಿ
> ಕಲ್ಯಾಣವ ಕಂಡು ನಮೋ ನಮೋ ಎನುತಿರ್ದೆನು.

ದಿಗಂಬರೆಯಾದ ಅಕ್ಕಮಹಾದೇವಿ ಕಲ್ಯಾಣಕ್ಕೆ ಬರುತ್ತಿರುವಾಗ, ಕಲ್ಯಾಣದ ಹತ್ತಿರಕ್ಕೆ ಬಂದು ಕಲ್ಯಾಣವ ಕಂಡು ಕೈಮುಗಿಯುವಳು. ಕಲ್ಯಾಣ ನಗರಿಯ ಒಳಗೆ ಬರುತ್ತಿರುವಾಗ ಬೀದಿಯಲ್ಲಿ ಕಂಡುಬರುವ ಶರಣರ ಆಲಯಗಳನ್ನು ಕಂಡು ಕೈಮುಗಿಯುವಳು. ಅನುಭವ ಮಂಟಪಕ್ಕೆ ಬಂದು ಪ್ರಭುದೇವ, ಬಸವಾದಿ ಶಿವಶರಣರನ್ನು ಕಂಡು ವಂದಿಸುವಳು. ಇನ್ನೊಂದು ವಚನದಲ್ಲಿ ಮಹಾದೇವಿಯಕ್ಕ ಹೇಳಿದ್ದಾಳೆ;

> ಕಲ್ಯಾಣ ಕೈಲಾಸವೆಂಬ ನುಡಿ ಹಸನಾಯಿತ್ತು
> ಒಳಗೂ ಕಲ್ಯಾಣ, ಹೊರಗೂ ಕಲ್ಯಾಣ!
> ಇದರಂತುವನಾರು ಬಲ್ಲರಯ್ಯ ?

ಹೀಗೆ ಕಲ್ಯಾಣ ಅಂದು ಕೈಲಾಸದ ಗೌರವವನ್ನು ಪಡೆದಿತ್ತು. ಸಾರ್ಥಕಗೊಂಡಿತ್ತು. ಒಳಗೂ ಕಲ್ಯಾಣ, ಹೊರಗೂ ಕಲ್ಯಾಣ, ಇದರ ಅಂತರಂಗವನ್ನು ಯಾರೂ ಅರಿಯದಷ್ಟು ವಿಶಾಲವಾಗಿತ್ತು. ಅಲ್ಲಿನ ಶರಣರು ವಚನ ಸಾಹಿತ್ಯ, ಕಲ್ಯಾಣ ಕ್ರಾಂತಿಯನ್ನು ಅರಿತವರಷ್ಟೇ ಕಲ್ಯಾಣದ ಮಹತಿಯನ್ನು ಮನಗಾಣಬಹುದು.

ಬಸವನಿಗಿಂತ ಪೂರ್ವದಲ್ಲಿ ಚಾಲುಕ್ಯರ ಮಹಾ ಆಸ್ಥಾನವಾದ ಕಲ್ಯಾಣ ಬಸವನ ಕಾಲದಿಂದೀಚೆಗೆ ಬಸವ ಕಲ್ಯಾಣವಾಯಿತು. ಚಾಲುಕ್ಯರ ರಾಜಧಾನಿಯಾಗಿ ಮೆರೆದ ಕಲ್ಯಾಣ ಬಸವಣ್ಣನ ಕಾಲದಲ್ಲಿ ಭಕ್ತಿ, ಜ್ಞಾನ, ಮಾನವೀಯ ಮೌಲ್ಯಕ್ಕೆ ಹೆಸರಾಯಿತು. ಮಾನವ ಕುಲ ಕೋಟಿಗೆ ಒಂದೇ ಮಾನವ ಕುಲ ಎಂದು ಸಾರಿ ಸಮತಾವಾದಕ್ಕೆ ಶ್ರಮಿಸಿತು. ಅಂತರಜಾತಿಯ ವಿವಾಹ ಏರ್ಪಡಿಸಿದಾಗ ಕಲ್ಯಾಣ ಕ್ರಾಂತಿಯಾಗಿ ಪ್ರಾಣಾರ್ಪಣೆ ಮಾಡಿದ ಶ್ರೇಯಸ್ಸು ಕಲ್ಯಾಣಕ್ಕಿದೆ. ಕಲ್ಯಾಣವು ಕೇವಲ ಭಾವುಕ ಭಕ್ತರಿಗಷ್ಟೇ ಕ್ಷೇತ್ರವಾಗದೇ ಮಾನವೀಯ ಮೌಲ್ಯಗಳಿಗೆ ಒತ್ತು ಕೊಡುವ, ಜಾತ್ಯಾತೀತ ಸಮಾಜ ನಿರ್ಮಿಸುವ ಆಸಕ್ತಿ ವಿಚಾರವಾದಿಗಳಿಗೆಲ್ಲ ಸುಕ್ಷೇತ್ರ. ವಚನಸಾಹಿತ್ಯ

ಓದಿದವರಿಗೆಲ್ಲ ಕಲ್ಯಾಣ-ಬಸವಕಲ್ಯಾಣ ಎಂಬ ಪದಗಳು ಕಿವಿ, ಮನಗಳಲ್ಲಿ ಅಣುರಣಿಸುತ್ತವೆ.

ಇಂದಿಗೂ ಕಲ್ಯಾಣದಲ್ಲಿ ಪರುಷಕಟ್ಟೆ, ಬಸವಣ್ಣನ ಅರಮನೆ, ಪ್ರಭುದೇವರ ಮಂದಿರ, ಮಡಿವಾಳ ಮಾಚಿದೇವರ ದೇವಾಲಯ, ಅಕ್ಕನಾಗಮ್ಮನ ಗವಿ, ತ್ರಿಪುರಾಂತಕ ಕೆರೆ ಇತ್ಯಾದಿಗಳನ್ನು ನೋಡಿದರೆ ಮನಸ್ಸು ಮೌನವಾಗುತ್ತದೆ. ಕಲ್ಯಾಣದ ಕ್ರಾಂತಿ ನೆನಪಿಗೆ ಬರುತ್ತದೆ. ಅಂದಿನ ಕಲ್ಯಾಣದಲ್ಲಿ ರೂಪಗೊಂಡ ವಚನ ವಾಙ್ಮಯ ಇಂದಿಗೂ ತಿಳಿದ ಜನರಲ್ಲಿ ನೆಲೆನಿಂತಿದೆ. ಜನಸಾಮಾನ್ಯರಿಗೂ ಕಲ್ಯಾಣದ ಭಾವ, ಭಾವನೆಯಿದೆ. ಕಲ್ಯಾಣದ ಮಹತಿಯನ್ನು ಹೊಗಳಿ ಜನಸಾಮಾನ್ಯರೂ ಇಂದಿಗೂ ಜನಪದ ಹಾಡುಗಳನ್ನು ಹಾಡುತ್ತಾರೆ. ಹಂತಿಯ ಹಾಡೊಂದು ಹೀಗಿದೆ.

ಕಲ್ಯಾಣ ತಡಿಮಟ, ಖಾಂಡ್ಯಮಾಡ್ಯಾರೆ ರೇಜ
ಸಾವಿರ ಚೀಲ ನೆರೆತಿಲ್ಲೋ – ಎಲೆ ಜಾಣ
ಧರೆಮಾಲಿನ್ಯ ಬೆಲ್ಲ ಉಳಿದಿಲ್ಲೋ.

ಹಂತಿ ಹೊಡೆಯುವವರು, ಇಂಥ ಹಾಡುಗಳನ್ನು ಹಾಡುತ್ತಾ ಭಾವಪರವಶರಾಗುತ್ತಾರೆ. ಕೇಳುಗರ ಮೈ ಮನ ತುಂಬುತ್ತಾರೆ. ಹೆಣ್ಣು ಮಕ್ಕಳು ಹಾಡುವ ಹಾಡುಗಳಲ್ಲೂ ಕಲ್ಯಾಣದ ಹೆಸರು ಕೇಳಿ ಬರುತ್ತದೆ. ಒಂದು ಜೋಗುಳದ ಹಾಡು ಹೀಗಿದೆ.

ಮಲ್ಲೀಗಿ ಹೂವ ಚೆಲ್ಲುತ ಬರುವಾಗ
ಕಲ್ಯಾಣ ದೇಶದವರು ತಡಿಯುವರು! ಬರುವಾಗ
ಚನ್ನಮಲ್ಲೇಶನ ತೂಗಿರಿ, ಸೀವ ತೂಗಿರಿ.

ಹೀಗೆ ಹಲವಾರು ಜಾನಪದ ಹಾಡುಗಳಲ್ಲಿ ಕಲ್ಯಾಣದ ಹೆಸರು ಜೀವಂತವಾಗಿ ನಿಂತಿದೆ. ಇಂದಿಗೂ ಕಲ್ಯಾಣದ ನೆಲ, ನೀರು, ಬಿಲ್ವಸತ್ರಿವನ, ಮಂತಾದವುಗಳೆಲ್ಲ ಉತ್ತಮವಾಗಿವೆ. ಇಂದಿನ ಕಲ್ಯಾಣದಲ್ಲಿ ಅಂದಿನ ಕಲ್ಯಾಣ ಮತ್ತಾವ ರೂಪ ಪಡೆದುಕೊಂಡು ಮತ್ತೆ ಯಾವಾಗ ಗೋಚರವಾಗುತ್ತದೆಯೋ ಎಂದು ಜನರಲ್ಲಿ ಕಲ್ಪನೆ ಇಲ್ಲದಿಲ್ಲ. ಆದರೆ ಕಲ್ಯಾಣವನ್ನು ಕಟ್ಟುವುದು ಭಕ್ತರ ಜ್ಞಾನಿಗಳ, ದಾನಿಗಳ, ಮಾನವೀಯ ಮೌಲ್ಯವನ್ನು ಅರಿತ ಅಭಿಮಾನಿಗಳ ಕೆಲಸ.

೧೨ ನೇ ಶತಮಾನದಲ್ಲಿ ಕಲ್ಯಾಣ ಕ್ರಾಂತಿಯಾದ ಮೇಲೆ ಮತ್ತೆ ಕಲ್ಯಾಣವನ್ನು ಕಟ್ಟಲು ಕೊಡೇಕಲ್ಲ ಸಂಪ್ರದಾಯದ ಸಮಯ ಕಲ್ಯಾಣ, ವಿಜಯನಗರದ ವಿಜಯ ಕಲ್ಯಾಣ ...., ಕೊಡೇಕಲ್ಲ ಬಸವಣ್ಣನ ಅಮರ ಕಲ್ಯಾಣ, ನಾಗಾವಿ ಪರಿಸರದ ಧರ್ಮ ಕಲ್ಯಾಣ, ಹೀಗೆ ೧೨ ನೇ ಶತಮಾನದವರೆಗೂ ಕಲ್ಯಾಣದ ಮೇಲೆ ಕಲ್ಯಾಣ ಕಟ್ಟುತ್ತ ಬಂದ ನಾಲ್ಕು ಪ್ರಯತ್ನಗಳೂ ನಾವು ಇತಿಹಾಸ ದುದ್ದಕ್ಕೂ ನೋಡುತ್ತೇವೆ. ಹೀಗೆ ಕಲ್ಯಾಣಕ್ಕೆ ತನ್ನದೇ ಆದ ಇತಿಹಾಸ ಉಂಟು.

ಸಿದ್ಧಗಂಗಾ

# ಸಾಧಕಯೋಧ ಬಸವಣ್ಣ

—ಪ್ರೊ. ಬಿ.ಎಂ. ಪಾಟೀಲ, ಶ್ರೀ. ಚ.ಪ್ರಾ. ಪದವಿ ಕಾಲೇಜು, ಮಹಾಲಿಂಗಪುರ-587312

ಸಂಸ್ಕೃತ ಸುಭಾಷಿತಕಾರನೊಬ್ಬ ಹೀಗೆ ಹೇಳಿದ್ದಾನೆ:
ವಾಗ್ಮಿತೆದೈವಾಯತ್ತ, ಶತೇಷು ಜಾಯತೇ ಶೂರ;
ಸಹಸ್ರೇಷು ಚ ಪಂಡಿತ; ವಕ್ತಾದಶಸಹಸ್ರೇಷು
ದಾತಾ ಭವತಿ ವಾ ನವಾ.

ಅಂದರೆ ನೂರು" ಜನರಲ್ಲಿ ಒಬ್ಬ ಶೂರ ಹುಟ್ಟುತ್ತಾನೆ; ಸಾವಿರ ಜನರಲ್ಲಿ ಒಬ್ಬ ಪಂಡಿತ ಹುಟ್ಟುತ್ತಾನೆ; ಹತ್ತು ಸಾವಿರಕ್ಕೊಬ್ಬ ವಾಗ್ಮಿ ಹುಟ್ಟುತ್ತಾನೆ" ಎಂದು ಅರ್ಥ.

ವಸ್ತುಸ್ಥಿತಿ ಹೀಗಿರುವಾಗ ನಾಳೆ ಬಪ್ಪುವುದು ನಮಗಿಂದೇ ಬರಲಿ; ಇಂದು ಬಪ್ಪುದು ನಮಗೀಗಲೇ ಬರಲಿ" "ಜಾತಸ್ಯ ಮರಣಂ ಧ್ರುವಂ" ಮರಣವೇ ಮಹಾನವಮಿ" ಎಂದು ಸಾವನ್ನು ಕೂಡ ನಗುಮೊಗದಿಂದಲೇ ಆಹ್ವಾನಿಸುವ ಶೂರತನ; ಲಿಂಗವನ್ನೂ ಸಹ ಅಹುದಹುದೆಂದು ತಲೆದೂಗಿಸುವ ಮಾತಿನ ಗಾರುಡಿಗತನ; ತಮ್ಮ ನುಡಿ ಪರುಷಗಳಿಂದ ಸಹಸ್ರಾರು ಶರಣ ಹೃದಯಗಳಲ್ಲಿ ಜ್ಞಾನ ಜ್ಯೋತಿ ಬೆಳಗಿಸಿದ ಪಾಂಡಿತ್ಯತನ;

ಈ ಮೂರರಿಂದ ಮುಪ್ಪುರಿಗೊಂಡ ಬಸವಣ್ಣನಂಥ ಮಹಾನ್ ಮಹಿಮಾ ಪುರುಷ ವ್ಯಕ್ತಿಗಳು ಹುಟ್ಟುವುದಂತೂ ಕೋಟ್ಯಾನುಕೋಟಿ ಜನರಲ್ಲಿ ಒಬ್ಬರೆಂದೇ ಹೇಳಬಹುದು.

ಬಸವಣ್ಣನವರು ಒಳ್ಳೆಯ ದಾರ್ಶನಿಕರು, ವಿಭೂತಿ ಪುರುಷರು; ಕಾರಣಿಕ ಪುರುಷರು, ತತ್ವಜ್ಞಾನಿಗಳು, ಅನುಭಾವಿಗಳು, ಕವಿಗಳು, ಭಕ್ತಿಭಂಡಾರಿಗಳು, ಯುಗ ಪುರುಷರು, ಜ್ಞಾನಯೋಗಿಗಳು, ಸಂಸಾರಯೋಗಿಗಳು, ಕರ್ಮಯೋಗಿಗಳು, ರಾಜತಂತ್ರಜ್ಞರು, ಪವಾಡಪುರುಷರು, ಸಮತಾವಾದಿಗಳು, ಮಾನವತಾವಾದಿಗಳು, ತ್ಯಾಗಜೀವಿಗಳು, ಅಹಿಂಸಾವಾದಿಗಳು, ಧರ್ಮಪ್ರವಾದಿಗಳು, ದಲಿತರಬಂಧುಗಳು, ಸಮಾಜ ಸಂಘಟಕರು, ಪರಮವಿರಕ್ತರು, ಅರ್ಥಶಾಸ್ತ್ರಜ್ಞರು, ನೀತಿವಾದಿಗಳು=ಹೀಗೆ ಹಲವು ಹತ್ತು ಮುಖಗಳನ್ನು ಹೊಂದಿದ ಬಹುಮುಖ ವ್ಯಕ್ತಿತ್ವ ಅವರದು. ನೋಡುವವರ ಭಾವ, ಭಕ್ತಿ, ದೃಷ್ಟಿಗೆ ತಕ್ಕಂತೆ ಜಗದಗಲ, ಮುಗಿಲಗಲ, ಅಗಮ್ಯ, ಅಗೋಚರ, ಅಪ್ರತಿಮವಾಗಿ ಗೋಚರಿಸುವ ಭವ್ಯನಿಲುವು ಬಸವಣ್ಣನವರದು. ಒಟ್ಟನಲ್ಲಿ ಬಸವಣ್ಣನವರ ವ್ಯಕ್ತಿತ್ವದಲ್ಲಿ ಏನೇನಿದೆ? ಎಂಬ ಪ್ರಶ್ನೆಗೆ ಏನಿಲ್ಲ? ಎಂಬ ಮರುಪ್ರಶ್ನೆಯೇ ಉತ್ತರವಾಗುತ್ತದೆ.



ಕಾಲಿಲ್ಲದವಂಗೆ ಕಾಲುಕೊಟ್ಟೆ ಬಸವಾ
ಕಣ್ಣಿಲ್ಲದವಂಗೆ ಕಣ್ಣುಕೊಟ್ಟೆ ಬಸವಾ
ಎನ್ನ ಕಣ್ಣು ಕಾಲಿಂಗೆ ನೀನೆಯುಖ್ಯಾ ಬಸವಾ
ಕಪಿಲಸಿದ್ಧ ಮಲ್ಲಿನಾಥಯ್ಯಾ.

- ಸಿದ್ಧರಾಮ.

ಎತ್ತೆತ್ತ ನೋಡಿದರೆ ಅತ್ತತ್ತ ಬಸವನೆಂಬ ಬಳ್ಳಿ
ಎತ್ತೆತ್ತ ನೋಡಿದರೆ ಅತ್ತತ್ತ ಲಿಂಗವೆಂಬ ಗೊಂಚಲು
ಒತ್ತಿ ಹಿಂಡಿದೊಡೆ ಭಕ್ತಿ ಎಂಬ ರಸವಯ್ಯ

—ಮಡಿವಾಳ ಮಾಚಯ್ಯ

ರುದ್ರ ಲೋಕವ ಮರ್ತ್ಯಲೋಕಕ್ಕೆ ತಂದಾತ ಬಸವಣ್ಣ
ಶಿವಾಚಾರದ ಘನವ ಮೆರೆದಾತ ಬಸವಣ್ಣ

—ಚೆನ್ನಬಸವಣ್ಣ

ದೇವಲೋಕದವರಿಗೂ ಬಸವಣ್ಣನೇ ದೇವರು
ಮರ್ತ್ಯಲೋಕದವರಿಗೂ ಬಸವಣ್ಣನೇ ದೇವರು
ಮೇರುಗಿರಿ ಮಂದರಗಿರಿ ಮೊದಲಾದವೆಲ್ಲಕ್ಕೂ ಬಸವಣ್ಣನೇ ದೇವರು
ಮಲ್ಲಿಕಾರ್ಜುನಯ್ಯಾ
ನಿಮಗೂ ಎನಗೂ ನಿಮ್ಮ ಶರಣರಿಗೂ ಬಸವಣ್ಣನೇ ದೇವರು

—ಅಕ್ಕಮಹಾದೇವಿ

ಬಸವಣ್ಣ ನಿನ್ನ ಮಹಾನುಭವ ಕೇಳಿ ಎನ್ನ ಭವ ನಾಸ್ತಿಯಾಯಿತ್ತು.
ನಮ್ಮ ಗುಹೇಶ್ವರ ಲಿಂಗದಲ್ಲಿ ನೀನು ಅಜಾತನೆಂಬುದ ನೆಲೆಮಾಡಿ
ಭವಪಾಶಂಗಳ ಹರಿದಿಪ್ಪೆಯಾಗಿ ನಿನ್ನ ಸಂಗದಿಲಾನು ಬದುಕಿದೆನು

—ಅಲ್ಲಮಪ್ರಭು

ಎನಗೆ ಲಿಂಗವು ನೀವೇ ಬಸವಯ್ಯ
ಎನಗೆ ಸಂಗವು ನೀವೇ ಬಸವಯ್ಯ
ಎನಗೆ ಪ್ರಾಣವು ನೀವೇ ಬಸವಯ್ಯ

—ನೀಲಾಂಬಿಕೆ

ಬಸವಣ್ಣಾ ನೀವು ಮರ್ತ್ಯಕ್ಕೆ ಬಂದು ನಿಂದಡೆ
ಭಕ್ತಿಯ ಬೆಳವಿಗೆ ದೆಸೆದೆಸೆಗೆಲ್ಲಾ ಪಸರಿಸಿತಲ್ಲಾ

—ಅಕ್ಕನಾಗಮ್ಮ

ಬಸವಣ್ಣನವರ ವ್ಯಕ್ತಿತ್ವವನ್ನು ಕುರಿತು ಪ್ರಾಂಜಲ ಮನಸ್ಸಿನಿಂದ ಮಾಡಿದ ವ್ಯಾಖ್ಯಾನಗಳಿವು.

"ಕವಿಗೆ ಕವಿಮುನಿವಂ" "ಪಂಡಿತಂಗೆ ಪಂಡಿತ ಮುನಿವಂ" "ಸವತಿಗೆ ಸವತಿ ಪುರುಡಿಪಳ್" "ಬಿರುದರ್ಗೆ ಬಿರುದರ್ ಸೊಸುವರ್" "ಆಯಗಾರ ಆಯಗಾರ ಸೇರಲಾರ"—ಮುಂತಾದ ಮಾತುಗೆಳೆಲ್ಲ ಅನುಭವದಿಂದ ಪ್ರಚುರಗೊಂಡಿವೆ. ಇದು ಭೂಮಿಯ ಮೇಲೆ ಹುಟ್ಟಿದ ಪ್ರತಿಯೊಬ್ಬ ಮಾನವನ ಸಹಜವಾದ ಹುಟ್ಟು ದೌರ್ಬಲ್ಯ. ಆದರೆ ಅಲ್ಲಮಪ್ರಭು, ಚೆನ್ನಬಸವಣ್ಣ, ಸಿದ್ಧರಾಮ, ಮಡಿವಾಳ ಮಾಚಯ್ಯ, ಅಕ್ಕಮಹಾದೇವಿ, ನೀಲಾಂಬಿಕೆ, ಅಕ್ಕನಾಗಮ್ಮ ಹೀಗೆ ಮೇಲೆ ಲಕ್ಷಿಸಿದ ಆರೇಳು ಜನರಷ್ಟೇ ಅಲ್ಲ ಹನ್ನೆರಡನೆಯ ಶತಮಾನದ ಸಹಸ್ರಾರು ಶರಣ ಶರಣೆಯರೆಲ್ಲ ಬಸವಣ್ಣನವರ ವ್ಯಕ್ತಿತ್ವವನ್ನು ಮುಕ್ತ ಕಂಠದಿಂದ ಹಾಡಿ ಹರಿಸಿದ್ದಾರೆ. ಬಸವ ಪ್ರಕಾಶದಲ್ಲಿ ತಮ್ಮ ಜೀವನಪಥವನ್ನು ಕಂಡುಕೊಂಡಿದ್ದಾರೆ. ಶರಣಸಮುದಾಯಕ್ಕೆ ಗುರುಸ್ಥಾನದಲ್ಲಿದ್ದ ಅಲ್ಲಮಪ್ರಭುಗಳು ಮೊದಲ್ಗೊಂಡು ಎಲ್ಲ ಶರಣ-ಶರಣೆಯರು "ಬಸವಣ್ಣನವರ ಶ್ರೀಪಾದಕ್ಕೆ ನಮೋ ನಮೋ" ಎಂದು ಸಾವಿರ ನಮನ ಅರ್ಪಿಸಿದ್ದಾರೆ. ಜಾತಿ, ಲಿಂಗ, ವರ್ಗ, ವಯಸ್ಸು, ಅಂತಸ್ತು ಇವಾವುದರ ಭೇದವಿಲ್ಲದೆ ಅಂದಿನ ಶರಣ ಸಮುದಾಯವೆಲ್ಲ ಬಸವಣ್ಣನರನ್ನು ಪೂಜ್ಯ ಭಾವನೆಯಿಂದ ಕಂಡಿದೆ. ಒಟ್ಟಿನಲ್ಲಿ ಬಸವಣ್ಣನವರ ವ್ಯಕ್ತಿತ್ವ ಪ್ರಶ್ನಾತೀತವಾದದ್ದು. ಅವರ ವ್ಯಕ್ತಿತ್ವದ ಬಗ್ಗೆ ಯಾರಲ್ಲೂ ಎರಡು ಮಾತು ಇಲ್ಲವೇ ಇಲ್ಲ.

ಹೀಗೆಂದ ಮಾತ್ರಕ್ಕೆ ಹರಿಹರ, ಭೀಮಕವಿ ಮೊದಲಾದವರು ತಮ್ಮ ಕಾವ್ಯಗಳಲ್ಲಿ ಬಣ್ಣಿಸಿದ ಹಾಗೆ ಬಸವಣ್ಣನವರು ಆಕಾಶದಿಂದ ಭೂಲೋಕಕ್ಕೆ ಧುತ್ತನೆ ಬಂದಿಳಿದ "ಅವತಾರ ಪುರುಷ" ಎಂದು ಯಾರೂ ಭಾವಿಸಬಾರದು. ಬಸವಣ್ಣನವರು ಒಂದು ಸಾಮಾನ್ಯ ಮನೆತನದಲ್ಲಿ ಹುಟ್ಟಿ ಅಸಾಮಾನ್ಯ ವ್ಯಕ್ತಿತ್ವವನ್ನು ಬೆಳೆಸಿಕೊಂಡ ಒಬ್ಬ ಚಾರಿತ್ರಿಕ ವ್ಯಕ್ತಿ. ಈಮಾತಿಗೆ ಅವರ ವಚನಗಳೇ ಮಹಾ ಪ್ರಮಾಣಗಳಾಗಿವೆ. ಅವರು ತಮ್ಮ ಸಾಧಕ ಜೀವನದ ಅಡ್ಡಿ-ಆತಂಕಗಳನ್ನೆಲ್ಲ ಬಿಚ್ಚು ಮನಸ್ಸಿನಿಂದ ಹೇಳಿಕೊಂಡಿದ್ದಾರೆ. ಕೆಲ ವಚನಗಳಂತೂ ಬಸವಣ್ಣನವರ ಹೃದಯವನ್ನೂ ತೆರೆದಿಟ್ಟ ಹೊತ್ತಿಗೆಯಂತಿವೆ. ಅವರ ವಚನಗಳನ್ನು ಸ್ಥೂಲವಾಗಿ ನೋಡಿದರೆ ಆಶ್ಚರ್ಯವಾಗುತ್ತದೆ. ಯಾಕೆಂದರೆ ಬಸವಣ್ಣನವರ ಬದುಕು ನಾವು ಭಾವಿಸಿಕೊಂಡಂತೆ ಹೂವಿನ ಹಾಸಿಗೆಯಲ್ಲ, ಅದು ಶರಶಯನ. ಅವರು ತಮ್ಮ ಬದುಕಿನುದ್ದಕ್ಕೂ ಅನುಭವಿಸಿದ ಧರ್ಮ ಸಂಕಟಗಳು, ಅಗ್ನಿಪರೀಕ್ಷೆಗಳು ಅನಂತ. "ನೂರಾರು ಉಳಿಯ ಪೆಟ್ಟುತಿಂದ ಒಂದು ಕಲ್ಲು ಕಲಾಪ್ರತಿಮೆಯಾಗಿ ರೂಪಗೊಳ್ಳುತ್ತದೆ. ಆಗ ಕಲ್ಲಿನ ಪ್ರತಿಮೆಗೆ ಸಹಸ್ರಾರು ಭಕ್ತ ಜನ ಸ್ತೋಮ ನಿತ್ಯ ಅಭಿಷೇಕ ಮಾಡಿ ಪೂಜ್ಯತೆಯಿಂದ ಆರಾಧಿಸುತ್ತದೆ" ಹಾಗೆಯೇ ಬಸವಣ್ಣನವರು ತಮ್ಮ ಬದುಕಿನಲ್ಲಿ ಎಂಥ ಪ್ರಸಂಗಗಳು ಘಟಿಸಿದರೂ ಅಚಲವಾದ ಆತ್ಮವಿಶ್ವಾಸವಿಟ್ಟು ಛಲದಿಂದ ಹೋರಾಡಿ ಅವೆಲ್ಲವುಗಳನ್ನೂ ಮೆಟ್ಟಿನಿಂತರು. ಬದು

(26 ನೇ ಪುಟ ನೋಡಿ)

ಕಿನ ಒಂದೊಂದೇ ಮಜಲುಗಳನ್ನು ಹತ್ತಿ "ಮಹಾಪುರುಷ" "ಪವಾಡಪುರುಷ" "ಕಾರಣಿಕಪುರುಷ" "ದೇವಪುರುಷ'' ಎಂದೆಲ್ಲ ಪಟ್ಟಕ್ಕೇರಿದರು. ಪ್ರಪಂಚದ ಎಲ್ಲ ಮಾನವರಿಂದ 'ಸೈ ಅನ್ನಿಸಿಕೊಂಡು "ವಿಶ್ವಗುರುಬಸವಣ್ಣ" ಎಂಬ ಹೆಗ್ಗಳಿಕೆಗೆ ಪಾತ್ರರಾದರು. ಇದೆಲ್ಲವನ್ನೂ ಗಮನಿಸದೆ ಬಸವಣ್ಣನೊಬ್ಬ ಮಹಾನ್ "ಸಾಧಕಯೋಧ" ಎಂದು ಯಾರಿಗಾದರೂ ಅನ್ನಿಸದೆ ಇರಲಾರದು.

ಏನಯ್ಯಾ ವಿಪ್ರರು ನುಡಿದಂತೆ ನಡೆಯರು ಇದೆಂತಯ್ಯ
ತಮಗೊಂದು ಬಟ್ಟೆ, ಶಾಸ್ತ್ರಕ್ಕೊಂದು ಬಟ್ಟೆ ?
ಕೂಡಲ ಸಂಗಮದೇವಯ್ಯಾ ಹೋಲೆಯರ ಬಸುರಲ್ಲಿ
ವಿಪ್ರರು ಹುಟ್ಟಿ ಗೋಮಾಂಸವ ತಿಂಬುವರೆಂಬುದಕ್ಕೆ ಇದೇ ದೃಷ್ಟ.

(ಬ ಷ. ವ, ೫೭೬)

ತಿನ್ನುವುದು ಬದನೆಕಾಯಿ; ಹೇಳುವುದು ಬದನೆಕಾಯಿ ಬೇಡೆಂಬ ಪುರಾಣ" ಎನ್ನುವ ಹಾಗೆ ಬ್ರಾಹ್ಮಣರು ನಡೆಯುವುದೊಂದು ಪರಿಯಾದರೆ ನುಡಿಯುವುದೊಂದು ಪರಿ. ನುಡಿ ಎಣ್ಣೆಯಾದರೆ ನಡೆ ಸೀಗೆಕಾಯಿ. ಒಟ್ಟಿನಲ್ಲಿ ಬ್ರಾಹ್ಮಣರು ತಮ್ಮ ಅನುಕೂಲಕ್ಕೆ ತಕ್ಕಂತೆ ಶಾಸ್ತ್ರ, ಪುರಾಣಗಳ ನಿಯಮಗಳನ್ನು ಮಾರ್ಪಡಿಸಿಕೊಳ್ಳುತ್ತಿದ್ದರು. ಅವರು ನುಡಿದದ್ದೇ ದೇವನಿಯಮ; ಮಾಡಿದ್ದೇ ಧಾರ್ಮಿಕ ಪದ್ಧತಿ ಆಚರಣೆ ಅರ್ಥವಿದ ಅನೇಕ ವ್ರತಗಳನ್ನು ದಿನನಿತ್ಯ ಆಚರಿಸುತ್ತಿದ್ದರು. ಬ್ರಹ್ಮಯಜ್ಞ, ಪಿತೃಯಜ್ಞ, ಭೂತಯಜ್ಞ, ಮಾನವ ಯಜ್ಞ, ದೇವಯಜ್ಞ ಎಂದು ಪಂಚಯಜ್ಞಗಳನ್ನು ಆಚರಿಸುತ್ತಿದ್ದರು. ಯಜ್ಞ ಮಾಡುವುದೊಂದು ಪವಿತ್ರ ಕಾರ್ಯವೆಂದೇ ಭಾವಿಸಿದ್ದರು. ಯಜ್ಞಗಳ ನೆಪದಲ್ಲಿ ಪ್ರಾಣಿಗಳನ್ನು ಬಲಿಕೊಡುತ್ತಿದ್ದರು. ಆ ಸಂದರ್ಭದಲ್ಲಿ ಪ್ರಾಣಿಗಳು ಚೀರಾಡಿ, ವಿಲಿವಿಲಿ ಒದ್ದಾಡಿ, ಪ್ರಾಣ ಬಿಡುವುದನ್ನು ಕಣ್ಣುತುಂಬ ನೋಡಿ ಕಿವಿತುಂಬ ಕೇಳಿ, ಮನತುಂಬ ಖುಷಿಪಟ್ಟು ಕೇಕೆ ಹಾಕಿ ಸ್ವರ್ಗ ಸುಖವನ್ನು ಅನುಭವಿಸುತ್ತಿದ್ದರು. ಅವುಗಳ ಮಾಂಸವನ್ನು ಜೊಲ್ಲು ಸುರಿಸಿ ಬಾಯಿ ಚಪ್ಪರಿಸಿ ಭಕ್ಷಿಸುತ್ತಿದ್ದರು ದಾನ-ವತ್ತಿಗಳನ್ನು ಸ್ವೀಕರಿಸುವ ನೆಪದಲ್ಲಿ ಅನೇಕ [illegible]ತಂತ್ರಗಳನ್ನು ಬಳಸಿ ಜನಸಾಮಾನ್ಯರನ್ನು ವಂಚಿಸುತ್ತಿದ್ದರು. ಮೇಲಾಗಿ ಅನೇಕ ತೆರನಾದ ಮಡಿ ಮೈಲಿಗೆಗಳನ್ನು ಪಾಲಿಸುತ್ತಿದ್ದರು. ಜೇಡರ ಹುಳು ತಾನೇ ನಿರ್ಮಿಸಿಕೊಂಡ ಬಲೆಯಲ್ಲಿ ಸಿಕ್ಕು ಪಾರಾಗದೇ ಉಸಿರುಗಟ್ಟಿ ಸತ್ತು ಹೋಗುವ ಹಾಗೆ ಸಾಮಾಜಿಕ ಮತ್ತು ಧಾರ್ಮಿಕ ಕಟ್ಟುಕಟ್ಟಳೆಗಳ ಸರಪಳಿಯಲ್ಲಿ ಬಂಧಿತರಾಗಿ ಬಿದ್ದು, ಒದ್ದಾಡಿ. ನರಳಾಡಿ, ಜರ್ಜರಿತರಾಗಿ ಕೆಲವೊಂದು ಸಲ ಸತ್ತು ಹೋಗುತ್ತಿದ್ದರು, ಇಂಥ ಬ್ರಾಹ್ಮಣ ಧರ್ಮದ ಕರ್ಮಕ್ರಿಯೆಗಳು ಬಸವಣ್ಣನವರ ಮನಸ್ಸಿಗೆ ಸರಿದೋರಲಿಲ್ಲ. ಅಂತಯೇ ಸ್ವತಂತ್ರ ಪ್ರಗತಿಪರ ವಿಚಾರವಾದಿಗಳಾದ ಬಸವಣ್ಣನವರು ಬಾಲ್ಯದಲ್ಲಿಯೇ ಬ್ರಾಹ್ಮಣ ಧರ್ಮವನ್ನು



ತ್ಯಜಿಸಿ ಹೊರಬರುತ್ತಾರೆ. ಯಾವುದೇ ಶಾಸ್ತ್ರೋಕ್ತಗಳ ನಿರ್ಬಂಧವಿಲ್ಲದ ಅಹಿಂಸಾ ಪರವಾದ, ದಯಾಮೂಲವಾದ ಸರಳವಾದ "ವೀರಶೈವ" ಧರ್ಮವನ್ನು ಸ್ವೀಕರಿಸುತ್ತಾರೆ. ಹೀಗೆ ಬಸವಣ್ಣನವರು ಬ್ರಾಹ್ಮಣ ಧರ್ಮದ ಸಂಪ್ರದಾಯ ಕ್ರಿಯಾ ವಿಧಿಗಳ ಸರಪಳಿಯಿಂದ ಜಾಡಿಸಿಕೊಂಡು ದಿಟ್ಟತನದಿಂದ ನೆಗೆದು ಹೊರ ಬಂದದ್ದು ಸಾಮಾನ್ಯ ಸಾಧನೆಯೇನಲ್ಲ ! ಬಸವಣ್ಣನವರ ವ್ಯಕ್ತಿತ್ವ ವಿಕಾಸಕ್ಕೆ ಹೊಸ ತಿರುವು ಕೊಟ್ಟ ಅತ್ಯಂತ ಮಹತ್ವದ ಘಟ್ಟವಿದು.

ವೇದಕ್ಕೆ ಒರೆಯ ಕಟ್ಟುವೆ
ಶಾಸ್ತ್ರಕ್ಕೆ ನಿಗಳವನಿಕ್ಕುವೆ
ತರ್ಕದ ಬೆನ್ನ ಬಾರನೆತ್ತುವೆ
ಆಗಮದ ಮೂಗು ಕೊಯ್ವೆ
ನೋಡಯ್ಯ ಮಹಾದಾನಿ ಕೂಡಲಸಂಗಮದೇವ
ಮಾದಾರ ಚೆನ್ನಯ್ಯನ ಮನೆಯ ಮಗನಾನಯ್ಯ.

[ ಬ.ಷ.ವ ೭೯೯]

ಹೀಗೆ ವೇದ, ಆಗಮ, ತರ್ಕಶಾಸ್ತ್ರಗಳಲ್ಲಿಯ ಮೌಲ್ಯಗಳನ್ನು ಒರೆಗೆ ಹಚ್ಚಿ ಪರಾಮರ್ಶಿಸಿ ಅಲ್ಲಿಯ ದೋಷಗಳನ್ನು ಕಂಡು ಇಷ್ಟೊಂದು ರಾಜಾರೋಷವಾಗಿ ಖಂಡಿಸಬೇಕಾದರೆ ಬಸವಣ್ಣನವರ ಎದೆ ಗುಂಡಿಗೆ ಎಷ್ಟೊಂದು ಗಟ್ಟಿಯಾಗಿದ್ದಿರಬೇಕಲ್ಲ.! ಎಂಟೆದೆ ಭಂಟ ಬಸವಣ್ಣನಂಥ ವ್ಯಕ್ತಿಗೆ ಮಾತ್ರ ಸಾಧ್ಯವಿದು.

ಬಸವಣ್ಣನವರ ವಚನಗಳದೇ ಒಂದು ವೈಶಿಷ್ಟ್ಯ. ಅಲ್ಲಮಪ್ರಭು, ಚೆನ್ನಬಸವಣ್ಣ ಮೊದಲಾದ ಶಿವಶರಣರ ವಚನಗಳಲ್ಲಿ ಕಾಣದೊರೆಯದ ಒಂದು ವೈಶಿಷ್ಟ್ಯವನ್ನು ನಾವು ಬಸವಣ್ಣನವರ ವಚನಗಳಲ್ಲಿ ಕಾಣುತ್ತೇವೆ. ಆ ವಿಶಿಷ್ಟತೆ ಏನೆಂದರೆ ಆತ್ಮ ಕಥನದ ನಿರೂಪಣೆ. ಸಾಧಕಾವಸ್ಥೆಯಲ್ಲಿಯ ತಮ್ಮ ಮನಸ್ಸಿನ ತೊಳಲಾಟದ ಚಿತ್ರಣವನ್ನು ಬಸವಣ್ಣನವರು ಹಲವಾರು ಪ್ರಾಣಿಗಳ ರೂಪಕದೊಂದಿಗೆ ವ್ಯಕ್ತಪಡಿಸಿದ್ದಾರೆ.

ಕೊಂಬೆಯ ಮೇಲಣ ಮರ್ಕಟನಂತೆ
ಲಂಘಿಸುವುದೆನ್ನ ಮನವು
ನಿಂದಲ್ಲಿ ನಿಲಲೀಯದೆನ್ನ ಮನವು
ಹೊಂದಿದಲ್ಲಿ ಹೊಂದಲೀಯಿದೆನ್ನ ಮನವು
ಕೂಡಲ ಸಂಗಮದೇವಾ
ನಿಮ್ಮ ಚರಣ ಕಮಲದಲ್ಲಿ ಭ್ರಮರನಾಗಿರಿಸು ನಿಮ್ಮ ಧರ್ಮ [ಬ.ಷ.ವ.೩೨]

"ಮಂಗನಿಂದ ಮಾನವನಾದ" ಎನ್ನುವುದು ಮಹಾನ್ ವಿಜ್ಞಾನಿ ಡಾರ್ವಿನ್ನನ ಸಿದ್ಧಾಂತ. ಮಾನವ ಮಂಗನಿಂದ ದೈಹಿಕ ರೂಪದಲ್ಲಿ ಬದಲಾವಣೆ ಆಗಿರುವನೇನೋ ನಿಜ. ಆದರೆ ಮಾನಸಿಕವಾಗಿ ಅಂಥ ಹೇಳಿಕೊಳ್ಳುವ ಯಾವುದೇ ಬದಲಾವಣೆ ಕಾಣ ಬರುವುದಿಲ್ಲ. ಮಂಗಬುದ್ಧಿಯ ಚಾಂಚಲ್ಯ ಚಪಲತೆ, ವಿಕೃತಚೇಷ್ಟೆ, ಅನಿಶ್ಚಿತತೆ, ಅಪಕ್ವತೆ, ಅವ್ಯವಸ್ಥೆ ಹಾಗೆಯೇ ಉಳಿದುಕೊಂಡಿವೆ. ಕೊಂಬೆಯನ್ನೇರಿದ ಕೋತಿಯು ನಿಷ್ಕಾರಣವಾಗಿ ಒಂದು ಕೊಂಬೆಯಿಂದ ಇನ್ನೊಂದು ಕೊಂಬೆಗೆ ನೆಗೆದಾಡುವುದು. ಹಾಗೆಯೇ, ಮಾನವನ ಮನಸ್ಸು ಒಂದೆಡೆಯಲ್ಲಿ ಸ್ಥಿರವಾಗಿ ನಿಲ್ಲದೆ ಲಂಗುಲಗಾಮಿಲ್ಲದೆ ಎತ್ತೆತ್ತೊ ಜಿಗಿದಾಡುವುದು. ನಿಂತರೆ ಸಮಾಧಾನವಿಲ್ಲ. ಕುಂತರೆ ಸಮಾಧಾನವಿಲ್ಲ. ಮಲಗಿದರೂ ಸಮಾಧಾನವಿಲ್ಲ, ತಿಂದುಂಡರೂ ಸಮಾಧಾನವಿಲ್ಲ, ಉಟ್ಟುತೊಟ್ಟರೂ ಸಮಾಧಾನವಿಲ್ಲ, ಏನೆಲ್ಲ ಇದ್ದರೂ ಸಮಾಧಾನವಿಲ್ಲ ಇಲ್ಲದಿದ್ದರೂ ಸಮಾಧಾನವಿಲ್ಲ ಒಟ್ಟಿನಲ್ಲಿ ಏನೇನು ಮಾಡಿದರೂ ಈ ವಿಕಾರವಾದ ಮನಸ್ಸಿಗೆ ತೃಪ್ತಿ-ಶಾಂತಿ ಎಂಬುವುದೇ ಇಲ್ಲ. ಯಾವಾಗಲೂ ಹಪಹಪಿಸುತ್ತಲೇ ಇರುತ್ತದೆ. ಒಳ್ಳೆಯದು ಯಾವುದು? ಕೆಟ್ಟದ್ದು ಯಾವುದು? ಎಂದು ನಿರ್ಣಯಿಸುವ ವಿವೇಕವೂ ಇಲ್ಲ, ಕೆಟ್ಟದ್ದರ ಕಡೆಗೇ ಎಳೆತ ಜಾಸ್ತಿ.

ಇಂಥ ಮನಸ್ಸಿನ ಸೂಕ್ಷ್ಮಾತಿ ಸೂಕ್ಷ್ಮಗಳನ್ನು ಬಸವಣ್ಣನವರು ತುಂಬ ಪರಿಣಾಮಕಾರಿಯಾಗಿ ವಿಶ್ಲೇಷಿಸಿದ್ದಾರೆ, "ಕೊಂಬೆಯ ಮೇಲಣ ಮರ್ಕಟ" "ಅಂದಣವನ್ನೇರಿದ ಸೊಣಗ" 'ಬೇಲಿವರಿದ ಓತಿ' "ಹೊತ್ತಿಗೊಂದುಪರಿ ಗೋಸುಂಬೆ" "ಬಾವುಲ" "ಬೆಲ್ಲವತಿಂದ ಕೋಡಗ" "ಹಡಿಕೆಗೆ ನೆಚ್ಚಿದ ಸೊಣಗ" "ಕಬ್ಬುತಿಂದ ನರಿ" "ಗಗನ ವಡರಿದ ಕಾಗೆ" "ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗ"—ಹೀಗೆ ನಾನಾ ಪ್ರಾಣಿಗಳ ರೂಪಗಳನ್ನು ಕೊಡುವುದರ ಮೂಲಕ ಬಸವಣ್ಣನವರು ಮನಸ್ಸಿನ ವ್ಯಾಪಾರವನ್ನು ಬಹು ಮನೋಜ್ಞವಾಗಿ ಬಣ್ಣಿಸಿದ್ದಾರೆ. ಅವರು ಬಳಸಿದ ಈ ರೂಪಕಾಲಂಕಾರಗಳು ಮಾನವ ಜನಾಂಗದ ಮನಸ್ಸಿನ ವಿರಾಟರೂಪದ ಚಿತ್ರವನ್ನು ಕಣ್ಣಿಗೆ ಕಟ್ಟುವಂತಿವೆ.

ಸಾಧಕನಾಗ ಬಯಸುವ ವ್ಯಕ್ತಿ ಮೊಟ್ಟ ಮೊದಲು ಮಾಡಬೇಕಾದ ಕಾರ್ಯವೆಂದರೆ ಮನಸ್ಸಿನ ಇಂಥ ಚಾಂಚಲ್ಯವನ್ನು ನಿವಾರಿಸುವುದು ಅವಶ್ಯಕ. ವಿಕಾರರೂಪ ತಾಳಿದ ಮನಸ್ಸಿನ ಚಾಂಚಲ್ಯವನ್ನು ನಿವಾರಿಸದ ಹೊರತು ಸಾಧಕವ್ಯಕ್ತಿಗೆ ಯಾವುದರಲ್ಲಿಯೂ ಯಶಸ್ಸು ಸಾಧ್ಯವಾಗದು.

"ಲೋಕದ ಚೇಷ್ಟೆಗೆ ರವಿ ಬೀಜವಾದಂತೆ
ಕರಣಂಗಳ ಚೇಷ್ಟೆಗೆ ಮನವೇ ಬೀಜ"

30 ನೇ ಪುಟ ನೋಡಿ

ಅಂದರೆ ಜಗತ್ತಿನ ಎಲ್ಲ ವ್ಯವಹಾರಗಳಿಗೆ, ಚೈತನ್ಯಕ್ಕೆ ಸೂರ್ಯನು ಕಾರಣೀಭೂತನಾಗಿರುವಂತೆ ಮಾನವನ ಸಕಲ ಇಂದ್ರಿಯಗಳ ವ್ಯವಹಾರಕ್ಕೆ ಮನಸ್ಸೇ ಕಾರಣ. ಆದ್ದರಿಂದ ಮನಸ್ಸು ಸ್ಥಿರವಾಗಿದ್ದರೆ, ದೃಢವಾಗಿದ್ದರೆ ಮಾತ್ರ ಏನಾದರೂ ಸಾಧಿಸಬಹುದು. ಆದರೆ ವಿಕಾರಗೊಂಡ ಮನಸ್ಸನ್ನು ಸ್ಥಿರವಾಗಿಸುವುದು ಅಷ್ಟೊಂದು ಸುಲಭ ಸಾಧ್ಯವಿಲ್ಲ. ಮನಸ್ಸನ್ನು ಸ್ಥಿರವಾಗಿಸಲು ಕೆಲವರು ಶರೀರ ಬತ್ತಲೆ ಮಾಡಿದ್ದಾರೆ; ಕೆಲವರು ತಲೆಬೋಳಿಸಿಕೊಂಡಿದ್ದಾರೆ; ಕೆಲವರು ನೀರಿನಲ್ಲಿ ಮುಳುಗಿದ್ದಾರೆ; ಕೆಲವರು ಗುಡ್ಡ, ಕಾಡು, ಬೆಟ್ಟ, ಗವಿ ಸೇರಿದ್ದಾರೆ; ಕೆಲವರು ಕಾವಿ ತೊಟ್ಟಿದ್ದಾರೆ; ಕೆಲವರು ಅನ್ನ ನೀರು ತೊರೆದಿದ್ದಾರೆ. ಹೀಗೆ ಇಷ್ಟೆಲ್ಲ ಮಾಡಿದರೂ ಅನೇಕರಿಗೆ ಮನಸ್ಸನ್ನು ನಿಗ್ರಹಿಸಲು ಸಾಧ್ಯವಾಗಿಲ್ಲ. ಸಾಧಕಾವಸ್ಥೆಯಲ್ಲಿ ಬಸವಣ್ಣನವರ ಪರಿಸ್ಥಿತಿಯೂ ಹೀಗೆ ಆಗಿದೆ. ಮನಸ್ಸು ಅವರನ್ನು ಅನೇಕರೀತಿಯಿಂದ ಕಾಡಿದೆ. ಆದರೆ ಬಸವಣ್ಣನವರು ಮನುಷ್ಯ ಸಹಜವಾದ ಮನಸ್ಸಿನ ದುರ್ಬಲ ಪ್ರವೃತ್ತಿಗಳನ್ನು ಅತ್ಯಂತ ಪರಿಶ್ರಮದಿಂದ ಅವ್ಯಾಹತವಾಗಿ ಹೋರಾಡಿ ಅವುಗಳನ್ನು ಹಂತ ಹಂತವಾಗಿ ಹತ್ತಿಕ್ಕಿದರು. ಕಾಯವಿಕಾರಕ್ಕೆ ಕಾರಣವಾದ ಪಂಚೇಂದ್ರಿಯಗಳನ್ನು, ಅರಿಷಡ್ವರ್ಗಗಳನ್ನು ಸತ್ಕ್ರಿಯೆಗೆ ಬಳಸಿಕೊಂಡು ಬದುಕಿನ ಸಾರ್ಥಕತೆಯನ್ನು ಹೊಂದುವಲ್ಲಿ ಯಶಸ್ವಿಯಾದರು.

"ಕಾಮ" ಅಥವಾ "ವಿಷಯಾಸಕ್ತಿ" ಸಾಧಕನ ವಿಘ್ನಗಳಲೆಲ್ಲಾ ಅತ್ಯಂತ ಬಲಾಢ್ಯವಾದದ್ದು. ಲೈಂಗಿಕ ಆಕರ್ಷಣೆ ಅಥವಾ ರತಿಸುಖದ ಬಯಕೆ ಮಾನವನಲ್ಲಿ ಪ್ರಕೃತಿ ಮೂಲವಾದದ್ದು. ಪ್ರಾಣಿಮೊದಲ್ಗೊಂಡು ಎಲ್ಲ ಜೀವರಾಶಿಗಳಲ್ಲಿ ಲೈಂಗಿಕ ಕ್ರಿಯೆ ಸಹಜವಾದದ್ದು. ಬಾಲ್ಯದಲ್ಲಿಯೇ ಬ್ರಹ್ಮಚರ್ಯದ ದೀಕ್ಷೆ ಪಡೆದು ಅನೇಕ ಸನ್ಯಾಸಿಗಳು ಮಠಾಧೀಶರುಗಳು, ಪೂಜಾರಿಗಳು, ಸ್ವಾಮಿಗಳು, ರತಿಸುಖದಿಂದ ವಂಚಿತರಾಗಿ ಬಾಹ್ಯದಲ್ಲಿ ಕಾವಿತೊಟ್ಟು ವೈರಾಗಿಗಳಂತೆ ನಟಿಸುತ್ತ ಅಂತರಂಗದಲ್ಲಿ ಲೈಂಗಿಕ ಸುಖವನ್ನು ಬಯಸುವ ಕೆಲವರಂತೂ ಒಂಟಿತನವನ್ನು ಸಹಿಸಿಕೊಳ್ಳಲಾರದೆ ಕಾವಿಯನ್ನು ಕಿತ್ತೆಸೆದು ಪುನಃ ಸಂಸಾರಿಗಳಾದವರೂ ಉಂಟು. ಬಾಹ್ಯದಲ್ಲಿ ಸಂಸಾರದ ಭೋಗೋಪಭೋಗಗಳನ್ನು ತ್ಯಜಿಸಬಹುದು; ಆದರೆ ಅಂತರಂಗದಲ್ಲಿ ಕಲ್ಪಿಸಿಕೊಂಡು ಸುಖಪಡಲು ಮನಸ್ಸು ಸದಾ ಹಾತೊರೆಯುತ್ತದೆ. ಹರಿ, ಹರ, ಬ್ರಹ್ಮ, ಇಂದ್ರ ಮೊದಲಾದ ದೇವದೇವಾದಿಗಳಿಗೂ ಕಾಮ ಅರ್ಥಾತ್ ವಿಷಯಾಸಕ್ತಿಯಿಂದ ವಿಮುಖರಾಗಲು ಸಾಧ್ಯವಾಗಿಲ್ಲ. "ಮನಸಿಜನ ಮಾಯೆ ವಿಧಿವಿಲಸನದ ನೆರಂಬಡೆಯ ಕೊಂದು ಕೂಗದೆ ನರರಂ" ಎಂಬ ಜನ್ನನ ಉಕ್ತಿಯನ್ನು ಇಲ್ಲಿ ಸ್ಮರಿಸಬಹುದು. ಆದ್ದರಿಂದ ಇಂದ್ರಿಯಗಳನ್ನು ನಿಗ್ರಹಿಸುವುದಕ್ಕಾಗಿ ದೇಹವನ್ನು ವಿವಿಧ ದಂಡನೆಗೊಳಪಡಿಸಿ ಆಧ್ಯಾತ್ಮ ಸಾಧನೆಗೆ ತೊಡಗುವ ಮೂಢತನವನ್ನು ಬಸವಣ್ಣನವರು ಪ್ರಬಲವಾಗಿ ವಿರೋಧಿಸಿದ್ದಾರೆ.

> "ಹುತ್ತವ ಬಡಿದಡೆ ಹಾವು ಸಾಯಬಲ್ಲುದೆ ಅಯ್ಯಾ
> ಅಘೋರ ತಪವ ಮಾಡಿದೊಡೇನು ?



ಎಂದು ಕೇಳಿದ್ದಾರೆ.

ಬಸವಣ್ಣನವರ ದೃಷ್ಟಿಯಲ್ಲಿ ಆಧ್ಯಾತ್ಮ ಸಾಧನೆ ಮಾಡುವವ ಲೈಂಗಿಕ ಕ್ರಿಯೆಯಿಂದ ವಂಚಿತನಾಗಬೇಕಾಗಿಲ್ಲ. ಸಂಸಾರ ಸುಖವನ್ನು ನಿರಾಕರಿಸಿ ಸನ್ಯಾಸಿಯಾಗುವುದು ಅನುಚಿತವಾದದ್ದು. ಲೈಂಗಿಕತೆಯನ್ನು ನಿರಾಕರಿಸುವುದೆಂದರೆ ಆತ್ಮವನ್ನು ವಂಚನೆಗೆ ಒಳಪಡಿಸಿದಂತಾಗುವುದು. ಲೈಂಗಿಕ ಬದುಕಿನಲ್ಲಿ ಸುಖ-ದುಃಖ, ನೋವು-ನಲಿವು ಕಷ್ಟ-ಕಾರ್ಪಣ್ಯ, ಎಡರು-ತೊಡರು, ಸಿಹಿ-ಕಹಿ ಮಾನ-ಅಪಮಾನ, ಸ್ತುತಿ-ನಿಂದೆ, ಎಲ್ಲವೂ ಸರ್ವ ಸಾಮಾನ್ಯವಾದವುಗಳು. ಬಸವಣ್ಣನವರು ಈ ಲೈಂಗಿಕ ಬದುಕಿನಲ್ಲಿ ಅನುಭವಿಸಿದ ಅನುಭವಗಳನ್ನೆಲ್ಲ ಆಧ್ಯಾತ್ಮ ಸಾಧನೆಗೆ ಅಡಿಗಲ್ಲುಗಳನ್ನಾಗಿ ಮಾಡಿಕೊಂಡಿದ್ದಾರೆ. ಆದ್ದರಿಂದ ಲೈಂಗಿಕದಲ್ಲಿ ಅರ್ಥಾತ್ ಸಂಸಾರದಲ್ಲಿ ಇದ್ದುಕೊಂಡು ಅಲ್ಲಿಯ ಭೋಗೋಪಭೋಗಗಳನ್ನು ಅನುಭವಿಸುತ್ತ ಆಧ್ಯಾತ್ಮ ಸಾಧನೆಗೆ ತೊಡಗುವುದು ಒಳ್ಳೆಯದೆಂದು ಬಸವಣ್ಣನವರ ಧೋರಣೆಯಾಗಿದೆ.

> ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಯಯ್ಯಾ
> ಪಶುವೇನ ಬಲ್ಲುದು ? ಹಸುರೆಂದೆಳಸುವುದು
> ವಿಷಯ ರಹಿತನ ಮಾಡಿ ಭಕ್ತಿರಸವ ದಣಿಯೆ ಮೇಯಿಸಿ
> ಸುಬುದ್ಧಿಯೆಂಬುದಕವನೆರೆದು
> ನೋಡಿ ಸಲಹಯ್ಯಾ ಕೂಡಲಸಂಗಮದೇವಾ
>
> (ಬ. ಷ. ವ. ೫೧)

ಆಧ್ಯಾತ್ಮ ಸಾಧಕನಿಗೆ ಲೈಂಗಿಕ ಸುಖ ಅಥವಾ ರತಿಸುಖ ಮಾರಕವಲ್ಲ! "ಊಟಕ್ಕೆ ಉಪ್ಪಿನ ಕಾಯಿ ಅವಶ್ಯಕ, ಆದರೆ ಉಪ್ಪಿನ ಕಾಯಿಯೇ ಊಟವಲ್ಲ" ವೆನ್ನುವಂತೆ ಮಾನವನಿಗೆ ಅದು ಹಿತಮಿತವಾಗಿರಬೇಕು ಅಷ್ಟೆ. ಹುಟ್ಟಿದ್ದೇ ತಿನ್ನಲೆಂದು ಭಾವಿಸಿದ ಹಸುವು ಕಣ್ಣಿಗೆ ಕಂಡದ್ದನ್ನೆಲ್ಲ ಹಂಬಲಿಸಿ ತಿಂದು ಸತ್ತುಹೋಗುವುದು. ಹಾಗೆಯೇ ರತಿಸುಖವನ್ನು ಹೊಂದುವುದೇ ತನ್ನ ಬದುಕಿನ ಪರಮಚರಮ ಗುರಿ ಎಂದು ಭಾವಿಸಿದಾಗ ಆಧ್ಯಾತ್ಮ ಸಾಧಕನಿಗೆ ರತಿಸುಖ ಮಾರಕವಾದುದು.

ಹೀಗಾದಾಗ ಸಾಧಕನ ಬದುಕು ಸುಂಟರಗಾಳಿಗೆ ಸಿಕ್ಕ ತರಗೆಲೆಯಂತಾಗುವುದು. ಬಲೆಯಲ್ಲಿ ಸಿಕ್ಕ ಜೇಡರ ಹುಳುವಿನಂತಾಗುವುದು. ಸಿಂಬಳದಲ್ಲಿ ಸಿಕ್ಕ ನೊಣದಂತಾಗುವುದು. ಆಧ್ಯಾತ್ಮ ಸಾಧಕಾವಸ್ಥೆಯಲ್ಲಿ ಬಸವಣ್ಣನವರ ಪರಿಸ್ಥಿತಿಯೂ ಹೀಗೆ ಆಗಿದ್ದಿತು, ಒಂದು ಕಡೆ ಆತ್ಮಸಾಕ್ಷಾತ್ಕಾರದ ಉಚ್ಚಧ್ಯೇಯ, ಇನ್ನೊಂದು ಕಡೆಗೆ ಸಂಸಾರ ದಂದುಗ ಬಿಡದ ಮನಸ್ಸಿನ ನೀಚ ಪ್ರವೃತ್ತಿ. ಬಸವಣ್ಣನವರು

**33 ನೇ ಪುಟ ನೋಡಿ**

ತ್ರಿಶಂಕು ಸ್ಥಿತಿಯಲ್ಲಿ ಸಿಕ್ಕಿ ಒದ್ದಾಡುತ್ತಾರೆ. ಆ ಅಂತರಂಗದ ಸಂಕೀರ್ಣ ಚಿತ್ರವನ್ನು ಬಸವಣ್ಣನವರು ಪ್ರಾಂಜಲ ಮನಸ್ಸಿನಿಂದ ಹೀಗೆ ನಿರೂಪಿಸಿದ್ದಾರೆ.

ಕಾಲಲಿ ಕಟ್ಟಿದ ಗುಂಡು
ಕೊರಳಲಿ ಕಟ್ಟಿದ ಬೆಂಡು
ತೇಲಲೀಯದು ಗುಂಡು
ಮುಳುಗಲೀಯದು ಬೆಂಡು;
ಇಂತಪ್ಪ ಸಂಸಾರ ಶರಧಿಯ ದಾಂಟಿಸಿ
ಕಾಲಾಂತಕನೇ ಕಾಯೋ ಕೂಡಲಸಂಗಯ್ಯ ಬ. ಷ. ವ. ೧೩

ಬಸವಣ್ಣನವರ ಅಂತರಂಗದ ಸಂಕೀರ್ಣ ಚಿತ್ರವಿದು. ಉದಾತ್ತಧ್ಯೇಯ ಉಳ್ಳ ಬಸವಣ್ಣನವರು ಶಿವದೀಕ್ಷೆ ಪಡೆದು ಲಿಂಗವನ್ನು ಕೊರಳಲ್ಲಿ ಕಟ್ಟಿಕೊಂಡಿದ್ದಾರೆ. ಸಂಸಾರ ಸಾಗರವನ್ನು ದಾಟುತ್ತೇನೆಂಬ ಧೈರ್ಯ ಅವರಿಗಿದೆ. ಆದರೆ ಮೂಲತಃ ನಿಂತ ಪ್ರವೃತಿಯುಳ್ಳ ಮನಸ್ಸು ಸಂಸಾರ ವ್ಯಾಮೋಹದಿಂದ ತಾವು ನಿರೀಕ್ಷಿಸಿದಷ್ಟು ಊರ್ಧ್ವಗಾಮಿಯಾಗಲು ಬಿಡದೆ ಅಧೋಗಾಮಿಯಾಗಿಸುತ್ತದೆ. ಕ್ಷಣ ಕ್ಷಣಕ್ಕೂ ಅವರ ಧೈರ್ಯವನ್ನು ಕೊಕ್ಕುತ್ತಿದೆ. ಆಗ ಬಸವಣ್ಣನವರ ಜೀವಾತ್ಮ ಎರಡೂ ಕಡೆಯಲ್ಲಿ ಸಿಕ್ಕು ಅತ್ತ-ಇತ್ತ ಹೊಯ್ದಾಡುತ್ತದೆ. ಕೊರಳಲ್ಲಿ ಕಟ್ಟಿದ ಲಿಂಗವು ಬೆಂಡಿನಂತೆ ಅಧ್ಯಾತ್ಮ ಸಾಧನೆಗೆ ತಾರಕವಾಗಿ ಮೇಲಕ್ಕೆತ್ತುತ್ತಿದ್ದರೂ ಸಂಸಾರವು ಕಾಲಿಗೆ ಕಟ್ಟಿಕೊಂಡ ಗುಂಡಿನಂತೆ ಭಾರವಾಗಿ ಕೆಳಕ್ಕೆ ಎಳೆಯುತ್ತದೆ ಸಂಪೂರ್ಣವಾಗಿ ಮುಳುಗುವಂತೆಯೂ ಇಲ್ಲ. ತ್ರಿಶಂಕು ಸ್ಥಿತಿಯಲ್ಲಿ ಸಿಕ್ಕಿ ಬಸವಣ್ಣನವರ ಜೀವ ಒದ್ದಾಡುತ್ತದೆ

ಕೇವಲ ಬೆಂಡನ್ನು ಮಾತ್ರ ಕಟ್ಟಿಕೊಂಡು ನೀರಿಗಿಳಿದರೆ ಸುರಕ್ಷಿತವಾಗಿ ಸಾಗರವನ್ನು ದಾಟುವ ಸಾಧ್ಯತೆಯಿದೆ. ಕೇವಲ ಗುಂಡನ್ನು ಮಾತ್ರ ಕಟ್ಟಿಕೊಂಡು ನೀರಿಗಿಳಿದರೆ ಇದಕ್ಕೆ ತದ್ವಿರುದ್ಧ; ಮುಳುಗಿ ಹೋಗುವುದರಲ್ಲಿ ಯಾವ ಸಂಶಯವಿಲ್ಲ. ಆದರೆ ಎರಡನ್ನು ಕಟ್ಟಿಕೊಂಡು ನೀರಿಗಿಳಿದರೆ ತುಂಬ ಕಷ್ಟ. "ಸಂಸಾರದಿಂದ ಹೊರಗುಳಿಯುವುದು ಸುಲಭ. ಸಂಸಾರದಲ್ಲಿ ಇದ್ದೂ ಇಲ್ಲದಂತಿರುವುದು ಅಷ್ಟು ಸುಲಭವಲ್ಲ" ಆದರೆ ಬಸವಣ್ಣನವರು ಸಾಧಿಸಿದ್ದು ಇಂತಹ ಮಹಾನ್ ಸಾಧನೆ. ಅವರು ಸಂಸಾರದಲ್ಲಿದ್ದು ಬ್ರಹ್ಮಚಾರಿ ಪಟ್ಟಕ್ಕೇರಿದ್ದಾರೆ.

ಸತಿಯ ಕಂಡು ವ್ರತಿಯಾದ ಬಸವಣ್ಣ.
ವ್ರತಿಯಾಗಿ ಬ್ರಹ್ಮಚಾರಿಯಾದ ಬಸವಣ್ಣ
ಬ್ರಹ್ಮಚಾರಿಯಾಗಿ ಭವಗೆಟ್ಟನಯ್ಯಾ ಬಸವಣ್ಣ
ಗುಹೇಶ್ವರ ನಿಮ್ಮಲ್ಲಿ ಬ್ರಹ್ಮಚಾರಿಯಾದವ ಬಸವಣ್ಣನೊಬ್ಬನೆ.

[ಅ. ವ. ಚಂ. ೮೯೬]

ವೈರಾಗ್ಯಮೂರ್ತಿಗಳಾದ, ಯೋಗಿಪ್ರವೀಣರಾದ ಅಲ್ಲಮಪ್ರಭುಗಳು ತಮ್ಮ ಪ್ರಾಂಜಲ ಮನಸ್ಸಿನಿಂದ ಬಸವಣ್ಣನವರನ್ನು ಕುರಿತು ಹೇಳಿದ ಮಾತಿದು. ಸಂಸಾರಿಯಾಗಿದ್ದು ಅಲ್ಲಿಯ ಭೋಗೋಪಭೋಗಗಳನ್ನು ಅನುಭವಿಸುತ್ತ ಆಧ್ಯಾತ್ಮದಲ್ಲಿಯೂ ಸಾಧನೆ ಮಾಡಿ ಯಶಸ್ಸು ಪಡೆದು ಆತ್ಮಸಾಕ್ಷಾತ್ಕಾರ ಹೊಂದಿದವರ ಸಂಖ್ಯೆ ಕೇವಲ ಬೆರಳೆಣಿಕೆಯಷ್ಟು ಮಾತ್ರ. ಅಂತಹ ಕೆಲವೇ ಕೆಲವು ಮಹಾನ್ ಸಾಧಕಯೋಧರಲ್ಲಿ ಬಸವಣ್ಣನವರು ಒಬ್ಬರು.

---

## ಸಾಮಾನ್ಯ

ಜಿ. ರಾಮಣ್ಣ [illegible], ಆಲೆಟ್ಟ. 24/6 ನಂಜುಂಡಪ್ಪ, ಕಾಂಪೌಂಡು, ಬೈರಸಂದ್ರ, ಜಯನಗರ,
ಒಂದನೇ ಬ್ಲಾಕ್ ಪೂರ್ವ ಬೆಂಗಳೂರು–560011

ಬೆನ್ನಿಗೆ ಹೊಟ್ಟೆಯೂ ತಾಗಿರುವುದೆಂದೂ
ಬೆತ್ತಲೆ ಮೈ, ತುಂಡು ಬಟ್ಟೆಯೊಳಿದೆಯೆಂದು
ಬರಿಕಾಲಲಿ ಸರ ಸರನೆ ನಡೆವನೆಂದು
ಅಣಕಿಸುವ ನಿನ್ನ ಕಣ್ಣುಗಳ ನೋಡಲಾರೆ !

ಇದ್ದಲು ಇವನ ಮೆಚ್ಚಿನ ಪೇಸ್ಟು
ಬೆರಳೆ ಇವನ ಉಜ್ಜುವ ಬ್ರಸ್ಸು
ಕೈಯೆ ಇವನ ತಿಕ್ಕುವ ಸೋಪು
ಚುಚ್ಚಿ ನುಡಿವುದ ನಾ ಕೇಳಲಾರೆ !

ಗದ್ದೆಯ ಕೆಸರು ಮೈಯಲ್ಲ ಸೌರರು
ಕೆಸರಲಿ ಕೆಲಸ ಹೊಟ್ಟೆಗೆ ವನವಾಸ
ತಲೆಯೇ ಸಾಮಾನುಗಳ ಸಾಗಿಸುವ ಬೋಗಿ
ಹೀಯಾಳಿಸುವುದ ನಾ ತಾಳಲಾರೆ !

ಡಿಕಾಶನ್ ಕಾಫಿಯೆ ಮಕ್ಕಳ ಫೆರೆಕ್ಸ್
ನೆಲದ ಚಾಪೆಯೆ ಕುಶನ್ ಬೆಡ್
ಹುಲ್ಲಿನ ಗುಡಿಸಲೆ ಅಂದದ ಅರಮನೆ
ಹೀನದೃಷ್ಟಿಯನಾ ಎದುರಿಸಲಾರೆ !

# ಎಲೆ ಎಲೆ ಮಾನವಾ, ಅಳಿಯಾಸೆ ಬೇಡವೊ

ಎಂ. ಮಾಧವಪ್ಪ, "ಶ್ರೀನಿವಾಸ" D.V.S. ಹೈಸ್ಕೂಲ್, ಪಕ್ಕ ವಿನೋಬನಗರ, ಶಿವಮೊಗ್ಗ-41

ಬಡತನಕ್ಕೆ ಉಂಬುವ ಚಿಂತೆ, ಉಣಲಾದರೆ ಉಡುವ ಚಿಂತೆ.
ಉಡಲಾದರೆ ಇಡುವ ಚಿಂತೆ, ಇಡಲಾದರೆ ಹೆಂಡಿರ ಚಿಂತೆ,
ಹೆಂಡಿರಾದರೆ ಮಕ್ಕಳ ಚಿಂತೆ ಮಕ್ಕಳಾದರೆ ಬದುಕಿನ ಚಿಂತೆ,
ಬದುಕಾದರೆ ಕೇಡಿನ ಚಿಂತೆ, ಕೇಡಾದರೆ ಮರಣದ ಚಿಂತೆ,
ಇಂತೀ ಹಲವು ಚಿಂತೆಯಲಿ ಇಪ್ಪವರನು ಕಂಡೆನು,
ಶಿವನ ಚಿಂತೆಯಲ್ಲಿದ್ದವರೊಬ್ಬರನು ಕಾಣೆನೆಂದಾತ ನಮ್ಮ
ಅಂಬಿಗರ ಚೌಡಯ್ಯ ನಿಜ ಶರಣನು.

ಮೇಲಿನ ಈ ವಚನದಲ್ಲಿ ತಿಳಿಯಪಡಿಸಿದಂತೆ ಲೋಕದಲ್ಲಿ ಮಾನವ ಸದಾ ಒಂದಲ್ಲ ಒಂದು ಚಿಂತೆಯಿಂದ, ವ್ಯಥೆಯಿಂದ ಬಳಲುತ್ತಿರುತ್ತಾನೆ. ಬದುಕಬೇಕು ಹಾಗೂ ಅದರಲ್ಲಿ ಸುಖ ಕಾಣಬೇಕೆಂಬ ಆಶೆ ಅವನನ್ನು ಈ ಚಿಂತೆಗಳ ಏಣಿಯನ್ನು ಹತ್ತುವಂತೆ ಮಾಡುತ್ತದೆ. ಆ ಏಣಿಯನ್ನು ಆತ ಹತ್ತುತಿದ್ದಾನಾದರೂ ಅವನು ಒಂದೊಂದೂ ಮೆಟ್ಟಲನ್ನು ಹತ್ತಿ ಮೇಲೆ ಹೋದಂತೆ ಹೋದಂತೆ ಚಿಂತೆಗಳ ಮೆಟ್ಟಲು ಮತ್ತೂ ಇರುತ್ತದೆಯೇ ಹೊರತು, ಅದು ಮುಗಿದು ಸುಖದ ನೆಲೆಯನ್ನು ತಲಪುವ ಅಂತಿಮ ಮೆಟ್ಟಲು ಆತನಿಗೆ ಪ್ರಾಪ್ತವಾಗುವುದೇ ಇಲ್ಲ. ಈ ಚಿಂತಾ ಸೋಪಾನವನ್ನು ಹತ್ತಿ ಸುಖದ ನಾಕವನ್ನು ಪ್ರವೇಶಿಸಲು ಆತ ಏನೆಲ್ಲಾ ಮಾಡು ತ್ತಿರುತ್ತಾನೆ ಅಥವಾ ಈ ಚಿಂತೆಯ ಪರಿಹಾರಕ್ಕೆಂದು ಆತ ಏನೇನೆಲ್ಲಾ ಮಾಡು ತ್ತಿರುತ್ತಾನೆ. ಹೀಗಾಗಿ ಯಾವಾಗಲೂ ಒಂದಲ್ಲ ಒಂದು ವಸ್ತುವಿನ ಬಯಸು ಯಿಂದ ಅವನು ಜೀವ ಮಾನವೆಲ್ಲ ತನ್ನ ಆ ಇಚ್ಛಾ ಪೂರ್ಣತೆಗಾಗಿ ಬಯಕೆ ತ್ತಿರುತ್ತಾನೆ. "ಒಡಕ ಮಡಕೆಯಂತೆ ಒಡೆದು ಹೋಗುವ ಕಾಯವನ್ನು ನೆಚ್ಚಿ" ಹೆಣಗಾಡು ಆಶಾ ಪೂರೈಕೆಗೆ ಒದ್ದಾಡುತ್ತಿರುತ್ತಾರೆ. ಆಶೆಯೆಂಬ ಪಾಶದಲ್ಲಿ ಭವಬಂಧಿತನಾಗು ತ್ತಾನೆ. ಆದರೂ ತಾನೆಷ್ಟು ಶ್ರಮಿಸಿದರೂ ದುಡಿದರೂ ಅವನ ಮನಸ್ಸಿಗೆ ಸಂತೃಪ್ತಿ ಯೆಂಬುದು ಇಲ್ಲದೆ ಸದಾ ಸಾಲದು ಎಂಬುದೇ ಆತನ ನಿತ್ಯಜಪವಾಗಿರುತ್ತದೆ.

ತ್ರಿಭುವನವೆಂಬ ಪಂಜರದೊಳಗೆ ಸಂಸಾರ ಚಕ್ರದಲ್ಲಿ
ಹೊನ್ನು ಹೆಣ್ಣು ಮಣ್ಣು ಇವೇ ಪ್ರಾಣವಾಗಿ,
ಈ ಸುಖದ ಸೊಕ್ಕಿನಲಿ ಈಸಿಯಾಡುತಿರ್ದರಲ್ಲಾ
ಬಹುವಿಧದ ವ್ಯವಹಾರ ವೇಧಿಸಿದವರು



ಎಂದು ಅಲ್ಲಮಪ್ರಭು ಹೇಳಿದಂತೆ ಹೆಣ್ಣು ಹೊನ್ನು ಮಣ್ಣುಗಳೇ ಜೀವವಾಗಿ ಅವು ಗಳಿಗಾಗಿ ಕೊರಗುತ್ತಿರುತ್ತಾನೆ, ಈ ಕೊರಗು ವ್ಯಕ್ತಿಗತವಾದುದ್ದಾಗಿದ್ದರೂ ಸಾರ್ವ ತ್ರಿಕ ಹರಡಿದ ಸರ್ವರ ಜಾಡ್ಯವಾಗಿದೆ. ಹೀಗೇಕೆ ? ಇದಕ್ಕುತ್ತರವಾಗಿ ಬುದ್ಧನು ತಾನು ಕಂಡ ಸತ್ಯದರ್ಶನವನ್ನು ಲೋಕಕ್ಕೆ ಸಾರಿದ. "ಆಶೆಯೇ ಸರ್ವದುಃಖಕ್ಕೂ ಮೂಲಕಾರಣ" ಎಂದು. ಆದರೂ ಜನ ಆಶಾಪಾಶದಿಂದ ಬಿಡುಗಡೆ ಹೊಂದುವುದಕ್ಕೆ ಶ್ರಮಿಸದೆ, ಮತ್ತೂ ಮತ್ತೂ ಅದನ್ನು ಬಿಗಿಗೊಳಿಸಿಕೊಂಡೇಹೋಗಿ. ಅದರ ಲ್ಲಿಯೇ ಜೀವಕಳೆದುಕೊಳ್ಳುತ್ತದೆ.

ನಿಜ. ಆಶೆಗಾಗಿ ಜನತೆ ಸಾಯುತ್ತಿದೆ,
ಆಶೆಗಾಗಿ ಸತ್ತುದು ನೂರುಕೋಟಿ,
ಆಮಿಷಕ್ಕಾಗಿ ಸತ್ತುದು ನೂರು ಕೋಟಿ
ಹೆಣ್ಣು ಹೊನ್ನು ಮಣ್ಣಿಗಾಗಿ ಸತ್ತುದು ನೂರುಕೋಟಿ,
ಗುಹೇಶ್ವರಾ, ನಿನಗಾಗಿ ಸತ್ತವರನಾರನೂ ಕಾಣೆ,

ಎಂದು ಅಲ್ಲಮಪ್ರಭುಗಳು ಲೋಕದ ವ್ಯಕ್ತಿತ್ವದ ಚಿತ್ರವನ್ನು ನೀಡಿದ್ದಾರೆ. ಇಲ್ಲಿ ಹೇಳಿದಂತೆ ಭೌತಿಕವಸ್ತುಗಳಿಗಾಗಿ ಆಶೆಪಟ್ಟು, ಅದೇ ಸುಖದ ಸರ್ವಸ್ವವೆಂದು ಭಾವಿಸಿ, ಅದನ್ನು ಸಾಧಿಸಲು ಮರಣವಪ್ಪುವವರೆಗೂ ಶ್ರಮಿಸುವುದರಲ್ಲಿಯೇ ತೊಡಗಿರುತ್ತಾನೆ. "ಧನಾಶಾ ಜೀವಿತಾಶಾಚಜೀರ್ಯತೋऽಪಿ ನ ಜೀರ್ಯತಿ" ದೈಹಿಕವಾಗಿ ಸಂಪೂರ್ಣ ಜೀರ್ಣನಾಗಿ "ಹೋದರೂ ಧನದಾಶೆ ಮತ್ತು ಜೀವಿತಾಶೆ ಇವೆರಡು ಜೀರ್ಣವಾಗು ವುದೇ ಇಲ್ಲ. ಯಾದುಸ್ತ್ಯಜಾದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃಯೋऽಸೌ ಪ್ರಾಣಾಂತಿಕೋರೋಗಸ್ತಾಂತೃಷ್ಣಾಂತ್ಯಜಿತಃಸುಖಂ||" ಮೂಢರು, ಆಶೆಯನ್ನು ಬಿಡಲು ಅಸಮರ್ಥರು. ಇಂಥವರ ಶರೀರವೆಲ್ಲವೂ ಜೀರ್ಣವಾದರೂ ಆಸೆ ಮಾತ್ರ ಜೀರ್ಣವಾಗದೆ ಹಾಗೇ ಉಳಿಯುವುದು. ಆಸೆಯೆಂಬುದು ಸಾಯುವವರೆಗೂ ಇರುವ ಮಹಾನ್ ಒಳರೋಗವು. ಇಂಥ ದುರ್ಲಕ್ಷಣೋಪಾತವಾದ ಆಶೆಗಳನ್ನು ತ್ಯಜಿಸಿದ ವನೇ ಸುಖಿಯಾಗುವನಾದರೂ ದುರ್ಮತಿಯು ಆಸೆಗಳನ್ನು ತ್ಯಜಿಸದೆ ದು:ಖಕ್ಕೆ ಒಳಗಾಗುವನು ಹಾಗೂ ಎಂದೆಂದಿಗೂ ವಾಸಿಯಾಗದ ಒಳರೋಗವಾಗಿರುವ ಈ ಆಸೆ ಸಾಯುವವರೆಗೆ ವೇದನೆಯನ್ನುಂಟು ಮಾಡುವಂತಹದ್ದು ಎಂದು ಮತ್ತೆ ಮತ್ತೆ ಪದ್ಮಪುರಾಣ ಎಚ್ಚರಿಸಿದೆ. ಆದರೂ ಮಾನವ ಈ ರೋಗವನ್ನು ವಾಸಿ ಮಾಡು ವುದಕ್ಕಾಗಿ ಕೈಕೊಳ್ಳಬೇಕಾದ ಔಷಧೋಪಚಾರ ಮಾಡುವ ಬದಲು, ರೋಗ ಉಲ್ಬಣವಾಗುವಂತೆ ಎಲ್ಲ ಅಪಥ್ಯಗಳನ್ನು ಸ್ವೀಕಾರ ಮಾಡಿ ನರಳುತ್ತಿರು ತ್ತಾನೆ. ಈ ರೋಗವಾದರೂ ಬೇಕು, ಇದರ ನಿವಾರಣೆ ಬೇಡ, ಇದಿಲ್ಲದೆ

39 ನೇ ಪುಟ ನೋಡಿ

...ನುಳಿಯಲಾರೆಯೆಂಬ ರೀತಿಯಲ್ಲಿ ಅದಕ್ಕೆ ಎಷ್ಟರಮಟ್ಟಿಗೆ ಅಂಟಿಕೊಂಡಿದ್ದಾನೆಂಬುದಕ್ಕೆ ಶಂಕರಾಚಾರ್ಯರ ವಾಣಿಯನ್ನು ಗಮನಿಸಬಹುದು:

ದಿನಮಪಿ ರಜನೀ ಸಾಯಂಪ್ರಾತಃ
ಶಿಶಿರವಸಂತೌ ಪುನರಾಯಾತಃ
ಕಾಲಕ್ರೀಡತಿ ಗಚ್ಛತ್ಯಾಯುಃ
ತದಪಿನ ಮುಂಚತ್ಯಾಶಾವಾಯುಃ

ದಿನರಾತ್ರಿಗಳೂಸಾಯಂ-ಪ್ರಾತಗಳೂ ಕಳೆದುಹೋಗುತ್ತ, ಶಿಶಿರವಸಂತಾದಿ ಋತುಗಳು ಮರಳಿ ಮರಳಿ ಬರುತ್ತಿರುತ್ತವೆ. ಈರೀತಿ ಕಾಲವು ಕ್ರೀಡಿಸುತ್ತಾ ಸಾಗುತ್ತಿದ್ದರೆ, ಅದರೊಂದಿಗೆ ನಮ್ಮ ಆಯುರ್ದಾಯವು ಕಳೆಯುತ್ತಿರುತ್ತದೆ. ಆದರೂ ಆಸೆಯೆಂಬ ವಾಯುವು ನರನನ್ನು ಬಿಡದು. ಇದರಿಂದ ಆಶೆಯ ಪ್ರಬಲತೆಯನ್ನು ಗುರುತಿಸಬಹುದಾಗಿದೆ.

ಮಾನವನಾದವನು ತನಗೆ ದೊರೆತ ಜೀವಿತಕಾಲವನ್ನು ಸತ್ಸಾಂಗತ್ಯ, ಭಗವಂತನಲ್ಲಿ ಅಚಲಭಕ್ತಿವಿಶ್ವಾಸ ಹಾಗೂ ಸದಾಚರಣೆಯ ಮೂಲಕ ತ್ಯಾಗ ಜೀವನವನ್ನು ನಡೆಸಿ ತನಗೂ ಲೋಕಕ್ಕೂ ಹಿತವಾಗುವಂತೆಬಾಳಿ ಜನ್ಮ ಸಾರ್ಥಕಪಡಿಸಿಕೊಳ್ಳಬೇಕಾಗಿದ್ದರೂ ಆತನು ಹಾಗೆಬಾಳುತ್ತಿಲ್ಲ. "ಉಪಭೋಗಾಚ್ಛತಂ ಗುಣಂದಾನಂ ಸುಖಕರಂಸ್ಮೃತಂ" ಪ್ರಿಯವಾದ ವಸ್ತುವನ್ನು ನಾವೇ ಭೋಗಿಸುವ ಆನಂದಕ್ಕಿಂತ ಅದನ್ನು ದಾನಕೊಟ್ಟಾಗ ಆಗುವ ಆನಂದವು ಅತ್ಯಧಿಕವಾಗಿರುತ್ತದೆಯೆಂದು ವಿದುರನೀತಿಯ ಈ ಸೂಕ್ತಿಯನ್ನು ಮನಕ್ಕೆ ತಂದು ಕೊಳ್ಳದೆ ಸದಾ ಅದು ಬೇಕು. ಇದು ಬೇಕು. ಮತ್ತೊಂದು, ಮಗದೊಂದು ಬೇಕು ಎಂದು ಹಂಬಲಿಸುತ್ತ ತನ್ನ ಜೀವಿತವನ್ನು ದುಃಖಕ್ಕೊಳಗು ಮಾಡಿಕೊಳ್ಳುತ್ತಿದ್ದಾನೆ.

ಆನೆ ಕುದುರೆ ಮಂದಿ ಸೇನಾ ಭಂಡಾರವ
ಏನ ಮಾಡಿದರಿಲ್ಲೋ ಜೀವವೇ ಈ
ಮಾನುಷ ಜನ್ಮಾಂತರದೊಳು ನೀ ಬಂದು
ಧಾವಂತ ಪಡಬ್ಯಾಡೋ ಜೀವವೇ॥
ಆಸೆ ಪಡಲಿಬ್ಯಾಡ, ಭಾಷೆ ತಪ್ಪಲಿ ಬ್ಯಾಡ
ಮೋಸ ಮಾಡಲಿ ಬ್ಯಾಡೋ ಜೀವವೇ॥

ಎಂದು ಪುರಂದರದಾಸರು ಕೇಳಿಕೊಂಡಿದ್ದರೂ' ಬಿಟ್ಟೆನೆಂದರೆ ಬಿಡದೀ ಮಾಯೆ' ಯೆಂಬಂತೆ ಆಳಕ್ಕಿಳಿದು ಬುಡ ಭದ್ರವಾದ ಆಶಾವೃಕ್ಷದಾಶ್ರಯವನ್ನು ಆತ ತ್ಯಜಿಸಲಾರ.

ಅಂಗಂಗಲಿತಂ ಪಲಿತಂ ಮುಂಡಂ
ದಶನವಿಹೀನಂ ಜಾತಂ ತುಂಡಂ
ವೃದ್ಧೋಯಾತಿ ಗೃಹೀತ್ವಾ ದಂಡಂ
ತದಪಿನ ಮುಂಚತಿ ಆಶಾ ಪಿಂಡಂ"

ಕೈಕಾಲು ಮುಂತಾದ ಸರ್ವಾಂಗಗಳು ಸಡಿಲು ಬಿದ್ದು ಜೋಲಾಡುತ್ತಿದ್ದರೂ ತಲೆ-ಗೂದಲು ನರೆತು ಬೀಳುಪೇರಿದ್ದರೂ, ಬಾಯಿಯಲ್ಲಿದ್ದ ಹಲ್ಲುಗಳೆಲ್ಲ ಬಿದ್ದು ಹೋಗಿದ್ದರೂ, ಮುಕ್ತ ಮುದುಕನಾಗಿ ತ್ರಾಣವಿಲ್ಲದೆ ದೊಣ್ಣೆಯನ್ನೂರಿಕೊಂಡು ನಡೆಯುವಂತಾದರೂ ಆಶಾಪಿಂಡವು ಮಾತ್ರ ಅವನನ್ನು ಬಿಡದು ಎಂದು ಶಂಕರರ ಮಾತು ಹಣ. ಹಣವೆಂದು ಹೆಣವಾಗುವ ಮಾನವನ ನೈಜ ಸ್ವಭಾವವನ್ನು ಮನವರಿಕೆ ಮಾಡಿಕೊಡುತ್ತಿದೆ.

ಇಷ್ಟು ಬಿಗಿ ಅಂಟಿನಂತಿರುವ ಈ ಆಶೆಯಿಂದಾಗಿ ದೊರಕುವ ಫಲವೇನು ಎಂದು ಪ್ರಶ್ನಿಸಿದರೆ ದೊರಕುವ ಉತ್ತರ ಮಾನಹಾನಿ, ಸರ್ವನಾಶವೆಂಬುದು.

ಆನೆಯನೇರಿಕೊಂಡು ಹೋದಿರೆ ನೀವು
ಕುದುರೆಯನೇರಿಕೊಂಡು ಹೋದಿರೆ ನೀವು,
ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೇ ನೀವು,
ಸತ್ಯದ ನಿಲವನರಿಯದೆ ಹೋದಿರಲ್ಲಾ
ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲಾ !
ಅಹಂಕಾರವೆಂಬ ಮದಗಜವೇರಿ
ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ

ಎಂದು ಬಸವಣ್ಣನವರು ಹೇಳಿದಂತೆ, ಅಹಂಕಾರ ಬಲಿತು ವಿಧಿಗೆ ಗುರಿಯಾಗುವುದಲ್ಲದೆ ಬೇರೆಯಲ್ಲ. "ತೃಷ್ಣಾಯಸ್ಯ ವೃಥಾ ತಸ್ಯ ಶ್ರುತಾನಿಚ್ಚ ಗುಣ ಶತೇ" ಆಶೆಯವನಜ್ಞಾನ ಗುಣಗಳೆಲ್ಲವೂ ವ್ಯರ್ಥವೇ ಸರಿ. ಇವನದು "ತುಪ್ಪದಸವಿಗೆ ಅಲಗು ನೆಕ್ಕುವ ಸೊಣ-ಗನಂತೆ ಬಾಳುವೆಯಾಗುತ್ತದೆ.

ಆಸೆಯಿಂದಾಗಿ ಮಾನಸಿಕ ಸ್ಥಿತಿ ಹದಗೆಡುತ್ತದೆ; ಆದರೂ ಅದು ನಿರಾಂತಕವಾಗಿ ಉಳಿಯುತ್ತದೆ;

ಯೌವ್ವನಂ ಜರಯಾಗ್ರಸ್ತಮಾರೋಗ್ಯಂ ವ್ಯಾಧಿಭಿರ್ಹತಂ|
ಜೀವಿತಂ ಮೃತ್ಯುರಭ್ಯೇತಿ ತೃಷ್ಣೈಕಾ ನಿರುಪದ್ರವಾ"



ಯೌವ್ವನಕ್ಕೆ ಮುಪ್ಪಿನ, ಆರೋಗ್ಯಕ್ಕೆ ವ್ಯಾಧಿಗಳ, ಬದುಕಿಗೆ ಸಾವಿನ ಭೀತಿಗಳಿವೆ. ಆದರೆ ಆಶೆ ಮಾತ್ರ ನಿರುಪದ್ರವವಾಗಿ ವರ್ಧಿಸುತ್ತದೆ. ಇಂತಹ ಈ ಆಶಾಲತೆ ಚಿಗುರಿತೆಂದರೆ ಅದು ಮುಂದೆ ಬದುಕಿಗೆ ಕಂಟಕಪ್ರಾಯವಾದ ಅನೇಕ ಟಿಸಿಲುಗಳನ್ನು ಚಾಚುತ್ತಾ ಸುತ್ತಮುತ್ತಲಿರುವುದನ್ನೆಲಾ ಆವರಿಸಿ ಕಬಳಿಸುತ್ತದೆ. ಪ್ರತಿಯೊಂದು ತನಗೇ ಬೇಕೆಂದು ಬಯಸುವುದು ಕಾಮ. ಬಯಸಿದ್ದು ದೊರಕದಿದ್ದಾಗ ಕ್ರೋಧ ಉದ್ಭವಿಸುತ್ತದೆ, "ಆಶೆ ಹರಿಯದು, ರೋಷ ಬಿಡದು" ಅಲ್ಲವೆ ! ಅದು ದೊರಕಿದರೆ ಅದರ ಮೇಲೆ ಮೋಹ ಬೆಳೆಯುತ್ತದೆ. ಹಾಗೂ ಇನ್ನೂ ಹೆಚ್ಚು ಹೆಚ್ಚು ಅದು ದೊರಕಬೇಕೆಂಬ ಲೋಭ ಬೆಳೆಯುತ್ತದೆ. ಲೋಭ ಪಾಪ ಭಾವನೆ ಬೆಳೆಸಲು ಕಾರಣವಾಗುತ್ತದೆ. ಅದು ತನಗೆ ದೊರಕಿದಾಗ ಅದನ್ನು ಪಡೆದವನು ತಾನೊಬ್ಬನೇ ಎಂಬ ಮದ ವರ್ಧಿಸುತ್ತದೆ. ಅದು ತನಗೆ ದೊರಕದೆ ಇನ್ನೊಬ್ಬರಿಗೆ ದೊರಕಿದರೆ ಪಡೆದವರ ಬಗ್ಗೆ ಮತ್ಸರ ಮೊಳೆಯುತ್ತದೆ. ಹೀಗೆ ಕಾಮನೆಯೊಂದರಿಂದ ಅರಿಷಡ್ವರ್ಗಗಳು ನಮ್ಮ ಬೆಂಬತ್ತಿ, ಅದರಿಂದ ಕಟ್ಟುವಡೆದಿಹ ನಮ್ಮ ಬಾಳನ್ನು ಹಿಂಡಿ, ಜೀವಿತದ ರಸವನ್ನೆಲ್ಲ ಹೀರಿ ನಮ್ಮನ್ನು ಎಲುಬಿನ ಹಂದರವಾಗಿಸುತ್ತದೆ. ಮನಸ್ಸೆಂಬ ಸಾಗರದಲ್ಲಿ ಬಿರುಗಾಳಿ ಎದ್ದು ಹಃಚ್ಕಾಟ ಪ್ರಾರಂಭವಾಗುತ್ತದೆ ಇದರ ಫಲವೇ ವೇದನೆಯನ್ನು ತಾಳಲಾರದೆ ಸತ್ತಂತೆ ಉರುಳಿದ ಪಶುವಿನ ಮಾಂಸವನ್ನು ಕಾಗೆ ಕುಕ್ಕಿ ಪೀಡಿಸುವಂತಿರುವ ಲಂಚಾವತಾರ, ಎಲ್ಲೆಲ್ಲೂ ವ್ಯಾಪಿಸಿರುವ ಭ್ರಷ್ಟಾಚಾರವೆಂಬ ಸೊಂಕುರೋಗ, ವರದಕ್ಷಿಣೆಯೆಂಬ ಪಿಶಾಚ ಪೀಡೆ, ಅಧಿಕಾರಕ್ಕಾಗಿ ಕಿತ್ತಾಟ, ರಾಜಕೀಯ ಡೊಂಬರಾಟ, ಹೊಡೆದಾಟ, ಬಡಿದಾಟ ಇತ್ಯಾದಿ ಸಮಾಜದ ನೆಮ್ಮದಿಯನ್ನು ಕಲಕುವ ಅನೇಕ ಸಮಸ್ಯಾಕಲ್ಲೋಲೂರ್ಮಿಗಳ ಹೊಯ್ದಾಟ ಇಂದಿನ ಈ ದುಸ್ಥಿತಿಯನ್ನು ಕಂಡು ಹೇಸಿಕೆ ಪಡುವಂತಾಗಿದೆ.

"ಆಶೆಯೆಂಬ ಶೂಲದ ಮೇಲೆ ವೇಷವೆಂಬ ಹೆಣವ ಕುಳ್ಳಿರಿಸಿ
ಧರೆಯ ಮೇಲುಳ್ಳ ಹಿರಿಯರು ಹೇಂಗೆ ಸವೆದರು ನೋಡಾ
ಆಶೆಯ ಮುಂದಿಟ್ಟುಕೊಂಡು ಸುಳಿವ ಹಿರಿಯರ ಕಂಡು
ಹೇಸಿಕೆಯಾಯಿತ್ತು ಗುಹೇಶ್ವರಾ"

ಹೀಗೆ ಹೇಸಿಕೆಯನ್ನುಂಟು ಮಾಡುವ ಈ ಆಶೆಯಾದರೂ ಎಂದಾದರೊಮ್ಮೆ ತೀರಿತು ಎಂದು ಹೇಳಲುಂಟೆ ? "ಆಶೆಗೆ ಅನ್ತವಿಲ್ಲ, ಪಾಶಕ್ಕೆ ಕಡೆಯಿಲ್ಲ." ವೂರ್ಣವಿದ್ದರೂ ಸ್ವರ್ಣದ ಬಯಕೆ ತೀರದು "ಎಂಬೀ ಗಾದೆಗಳೇ ಸಾರುತ್ತಿವೆ. ಆಶೆಗೆ ಕೊನೆಯಿಲ್ಲವೆಂದು. ಇದರ ಹರವು ಎಷ್ಟಿದೆಯೆಂಬುದನ್ನು ಜನಧರ್ಮದ ಗುಣಭದ್ರಾಚಾರ್ಯರು ತಮ್ಮ ಆತ್ಮಾನುಶಾಸನ ಗ್ರಂಥದಲ್ಲಿ ಹೀಗೆ ಸಾರಿದ್ದಾರೆ.

"ಆಶಾಗರ್ತಃ ಪ್ರತಿಪ್ರಾಣಿ ಯಸ್ಮಿನ್ ವಿಶ್ವಮಣಿವಂ ।
ಕಸ್ಯಕಿಂ ಕಿಯದಾಯತಿ ವೃಥಾವೋ ವಿಯೈಷಿತಾ ॥

ಪ್ರತಿಯೊಬ್ಬನಲ್ಲಿರುವ ಆಶೆಯು ಆಳವಾದ ಹೊಂಡವು ಬಲುದೊಡ್ಡದಾಗಿದೆ. ಅದರಲ್ಲಿ ಈ ವಿಶ್ವವು ಅಣುವಿನಂತೆ ಕಾಣುವುದು, ಹಾಗಿರುವಾಗ ಈ ಇಡೀ ಜಗತ್ತನ್ನು ಅವರವರ ಇಚ್ಛೆಯಂತೆ ಹಂಚಿದಾಗ ಯಾರಿಗೆ ಎಷ್ಟು ಬಂದೀತು ? ಅದುದರಿಂದ ಪರಿಗ್ರಹಾಭಿಲಾಷೆಯೇ ವ್ಯರ್ಥ. ಹೀಗಿರುವಾಗ ''ಇಂದಿಗೆಂತು ಎಂದು ಬೆಂದೊಡಲ ಹೊರೆಯ ಹೋಯಿತ್ತೆನ್ನ ಸಂಸಾರ' ಎಂದು ಬಸವಣ್ಣನವರು ಹೇಳಿದಂತೆ, ಆಶೆ ಮಾಡಿ ಮಾಡಿ ಬದುಕಿನಲ್ಲಿ ಸದಾ ಕೊರಗುತ್ತಾ ಬಾಳುವುದಕ್ಕಿಂತ

ಮೂಢ ಜಹೀಹಿ ಧನಾಗಮತೃಷ್ಣಾ। ಕುರುಸದ್ಬುದ್ಧಿಂ ಮನಸಿ ವಿತೃಷ್ಣಾಂ।
ಯಲ್ಲಭಸೇ ನಿಜ ಕರ್ಮೋಪಾತ್ತಂ। ವಿತ್ತಂತೇನ ವಿನೋದಯ ಚಿತ್ತಂ.

ಮೂಢನೇ ಹೆಚ್ಚಾಗಿ ಧನವನ್ನು ಗಳಿಸಬೇಕೆಂಬ ದುರಾಶೆಯನ್ನು ತ್ಯಜಿಸಿ, ನಿನ್ನ ಮನಸ್ಸಿನಲ್ಲಿ ಆಶಾರಹಿತವಾದ ಸದ್ಬುದ್ಧಿಯನ್ನುಂಟು ಮಾಡಿಕೊ. ನಿನ್ನ ಕರ್ಮಾನುಗುಣವಾಗಿ ದೊರೆಯುವ ಧನದಿಂದ ಚಿತ್ತವನ್ನು ತೃಪ್ತಿಗೊಳಿಸು ಎಂದು ಶಂಕರಾಚಾರ್ಯರೂ, ಬಂದುದ ಕೈಕೊಳ್ಳಬಲ್ಲಡೆ ನೇಮ" ಎಂದು ಬಸವಣ್ಣನವರೂ, ನೀಡಿದ ಬೋಧನೆಯನ್ನು ಮನಕ್ಕೆ ತಂದು ಕೊಳ್ಳುವುದು ಲೇಸಲ್ಲವೆ ! ಏಕೆಂದರೆ ತನು, ಮನ ಧನವೆಂಬ ಕನ್ನಡಿಯ ನೋಡಯ್ಯಾ, ಎನ್ನದೂ ಅಲ್ಲ ನಿನ್ನದೂ ಅಲ್ಲವಾಗಿರುವುದನ್ನು ಪೋಷಿಸಲು ಆಶಿಸಿ ಆಶಿಸಿ ಒದ್ದಾಡುವುದರಿಂದ ಏನನ್ನೂ ಸಾಧಿಸದಂತಾಗುವುದಿಲ್ಲ. ಆಶೆಯುಳ್ಳನ್ನಕ್ಕ ಒಬ್ಬರ ಆಶ್ರಯಿಸುವ ಆಶ್ರಯದಾಸೆ ಕರಕಷ್ಟ ಕಾಣಿರೋ ಎಂದು ಗೋಗರೆಯುವಂತೆ ಆ ಆಶೆಯ ಜೀತದಾಳಾಗಿ ಬಿಟ್ಟಿ ಮಾಡಬೇಕಾಗಿ ಬರುವುದಷ್ಟೆ ಅದರ ಫಲ. "ಆಶಾ ಬಲವತೀಕಷ್ಟಂ ಎಂದು ಉದ್ಗಾರ ತೆಗೆಯುವುದಷ್ಟೇ ನಮ್ಮ ಪಾಲಿಗೆ ಉಳಿಯು ವಂತಹದ್ದು ಆದ್ದರಿಂದ

ಆಶಾಯಾಃ ಯೇದಾಸಾಸ್ತೇದಾಸಃ ಸರ್ವಸ್ಯ ಲೋಕಸ್ಯ।
ಆಶಾದಾಸೀಕೃತಾಯೇನ ತಸ್ಯದಾಸಾಯತೇ ವಿಶ್ವಂ॥

ಯಾರು ಆಶೆಯದಾಸರೊ ಅವರು ಲೋಕದಾಸರು. ಅದೇ ಆಶೆಯಾರಿಗೆ ದಾಸಿಯೋ ಅವರಿಗೆ ಲೋಕವೆಲ್ಲ ದಾಸನಂತಿರುವುದು ಎಂಬ ಸೂಕ್ತಿಯನ್ನು ಮನನ ಮಾಡಿಕೊಂಡು ಆಶೆಯನ್ನು ತಿರಸ್ಕರಿಸಿ "ತೃಷ್ಣಾಯದಿ ಪರಿತ್ಯಕ್ತಾಕೋ ದರಿದ್ರಃ ಕಃ ಈಶ್ವರಃ" ಎಂಬಂತೆ ಈಶ ತುಲ್ಯನಾಗಲು ಶ್ರಮಿಸುವುದು ಒಳಿತು. ಆಲಿಸಿ ಸೂಳ್ನುಡಿಗಳನ್ನು;

"ಆಸೆಯೇ ದಾಸಕಾಣಿರೋ, ನಿರಾಸೆಯೇ ಈಶಕಾಣಿರಣ್ಣಾ
"ಆಸೆಯ ನಳಿದು ರೋಷವ ನಿಲಿಸಿ, ಜಗದಪಾಶವನರಿದು
ಈಶ್ವರನೆನಿಸಿಕೊಂಬ ಶರಣರ, ಜಗದ



ಹೇಸಿಗಳೆತ್ತ ಬಲ್ಲರು ಅಪ್ಪಣ್ಣ ಪ್ರಿಯ ಚೆನ್ನಬಸವಣ್ಣ
ಆಶೆಯುಳ್ಳಾತ ಒಬ್ಬರಧೀನದಲ್ಲಿಪ್ಪನು,
ಆಶೆಯ ಮನದ ಕೊನೆಯ ನರಿದಾತ
ಕೈಲಾಸದಾಚೆಯಲ್ಲಿಪ್ಪನೆಂದಾತ ಅಂಬಿಗರ ಚೌಡಯ್ಯ"
"ದಾಸತ್ವದ ಈಶತ್ವದ ಅನುವ ವಿಚಾರಿಸಿ, ಆಶೆಯಡಗಿದರೆ ಅದೇ
ಈಶಪದವು ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ."

ಆದ್ದರಿಂದಲೇ "ಕರ್ಮಣ್ಯೇವಾಧಿಕಾರಾಸ್ತೇ ಮಾಫಲೇಷು ಕದಾಚನ"-ಫಲದಾಶೆಯನ್ನು ಮಾಡದೆ ಕರ್ಮ ಮಾಡು ಎಂದು ಬೋಧಿಸಿದೆ ಗೀತೆ. "ಆಸೆಯಿಂದ ಬಿಟ್ಟು ಕಿರಿಯರಿಲ್ಲ, ನಿರಾಸೆಯಿಂದ ಬಿಟ್ಟ ಹಿರಿಯರಿಲ್ಲ, ದಯದಿಂದ ಬಿಟ್ಟು ಧರ್ಮಬಲ್ಲ, ವಿಚಾರದಿಂದ ಬಿಟ್ಟು ಸಹಾಯಿಗಳಿಲ್ಲ. "ಅದಕ್ಕಾಗಿಉದ್ಗ್ರಂಥಗಳ ಅಧ್ಯಯನ ಮಾಡಿ, ಪರಮಾತ್ಮ ಸ್ವರೂಪವನ್ನು ಸದಾ ಧ್ಯಾನಿಸಿ, ಅನವರತ ಸಜ್ಜನ ಸಹವಾಸವನ್ನು ಮಾಡಿ, ದೀನ ದಲಿತರಿಗೆ ಧನ ಸಹಾಯ ನೀಡಿಬದುಕು ಸಾರ್ಥಕ ಪಡಿಸಿಕೊಳ್ಳಬೇಕಾದುದು ಅವಶ್ಯ. ಭೋಗಬೇಕು; ಆದರೆ ಅದು ತ್ಯಾಗದ ಮೇಲೆ ಅವಲಂಬಿಸಿರಲಿ. ಆಶಾತ್ಯಾಗದಿಂದ ಆತ್ಯಂತಿಕ ದುಃಖ ನಿವೃತ್ತಿಹೊಂದಿ ಕೃತಾರ್ಥರಾಗಬೇಕೆಂಬುದೇ ಸಕಲ ಧರ್ಮಗಳ ಸಂದೇಶವು.

"ಎಲೆ ಎಲೆ ಮಾನವಾ, ಅಳಿಯಾಸೆ ಬೇಡವೋ
ಕಾಳಬೆಳದಿಂಗಳ ಸಿರಿ ಸ್ಥಿರವಲ್ಲ
ಕೇಡಿಲ್ಲದ ಪದವಿ ಕೂಡಲ ಸಂಗಮದೇವನ
ಮರೆಯದೆ ಪೂಜಿಸೊ"

ಎಂಬೀ ಹಿತವಚನ ನಮ್ಮ ಬಾಳಿಗೆ ಪಥ ಪ್ರದರ್ಶಕ ದೀವಿಗೆಯಾಗಿದೆ.

---

ಬಸವಣ್ಣಾ ನಿನ್ನ ಕಂಡು ಎನ್ನ ತನು ಬಯಲಾಯಿತ್ತು,
ಬಸವಣ್ಣಾ ನಿನ್ನ ಮುಟ್ಟಿ ಮುಟ್ಟಿ ಎನ್ನ ಶ್ರೀ ಬಯಲಾಯಿತ್ತು,
ಬಸವಣ್ಣಾ ನಿನ್ನ ನೆನೆ ನೆನೆನು ಎನ್ನ ಮನ ಬಯಲಾಯಿತ್ತು,
ಬಸವಣ್ಣಾ ನಿನ್ನ ಮಹಾನು ಭಾವವ ಕೇಳಿ ಕೇಳಿ ಎನ್ನಭವಂ ನಾಸ್ತಿಯಾಯಿತ್ತು,
ನಮ್ಮ ಗುಹೇಶ್ವರನ ಲಿಂಗದಲ್ಲಿ ನೀನ ಜಾತನೆಂಬುದ ನೆಲೆ ಮಾಡಿ ಭಾವಪಾಶಂಗಳ
ಹರಿದಿಪ್ಪೆಯಾಗಿ,
ನಿನ್ನ ಸನ್ನಿಧಿಯಿಂದ ಆನು ಬದುಕಿದೆನು ಕಾಣಾ ಸಂಗನ ಬಸವಣ್ಣಾ

-ಅಲ್ಲಮಪ್ರಭುದೇವರು-

# ಕ್ಷೇತ್ರವಾರ್ತೆ

—ಎಚ್. ಬಿ. ಗಂಗಾಧರಯ್ಯ

**ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ 86ನೇ ಜನ್ಮದಿನೋತ್ಸವ.**

11 ಏಪ್ರಿಲ್ ಭಾನುವಾರ 1993 ಗುರುವಂದನ ಪೂಜ್ಯ ಶ್ರೀ ಶ್ರೀ ಗಳವರ 86ನೇ ಜನ್ಮದಿನೋತ್ಸವ ಸಮಾರಂಭ ಶ್ರೀ ಮಠದಲ್ಲಿ ನೆರವೇರಿತು.

ಶ್ರೀ ಶ್ರೀಗಳವರನ್ನು ಹಳೆಯ ಮಠದಿಂದ ಅತಿಥಿಗಳು, ಸನ್ಮಾನಿತರು, ಗಣ್ಯರು, ಹಳೆವಿದ್ಯಾರ್ಥಿಗಳು, ಭಕ್ತ ಸಮೂಹ ಬಸವೇಶ್ವರ ಶಿಕ್ಷಕ ತರಬೇತಿ ಸಂಸ್ಥೆಯ ವಿದ್ಯಾರ್ಥಿನಿಯರು ಪಂಚಕಳಸ, 86 ಪೂರ್ಣ ಕುಂಭಗಳನ್ನು ಹೊತ್ತು ರಾಜ್ಯಪ್ರಶಸ್ತಿ ವಿಜೇತ ಎಚ್. ಎಸ್. ನೀಲಕಂಠಯ್ಯನವರ ವೀರಗಾಸೆ ನೃತ್ಯದೊಂದಿಗೆ ವೇದಿಕೆಗೆ ಭಕ್ತಿಭಾವದಿಂದ ಕರೆತರಲಾಯಿತು.

ಪ್ರಾರಂಭಕ್ಕೆ ಕೆ. ಎಸ್. ಶಿವನಂಜಯ್ಯ ಮತ್ತು ಸಂಗಡಿಗರಿಂದ ಉಪನಿಷತ್ ವಾಕ್ಯ ಪಠಣವಾಯಿತು. ನಂತರ ಮಾಜಿ ಮುಖ್ಯ ಮಂತ್ರಿ ಶ್ರೀ ವೀರೇಂದ್ರಪಾಟೀಲ್ ಜ್ಯೋತಿ ಬೆಳಗಿಸಿ ಉದ್ಘಾಟನಾ ಭಾಷಣ ಮಾಡಿದರು.

ಸಿದ್ಧಗಂಗಾ ಚಿಕ್ಕ ಮಠದಿಂದ ದೊಡ್ಡಮಠವಾಗಿ ನಾಡಿಗೆಲ್ಲಾ ಸೇವಾಕಾರ್ಯವನ್ನು ವಿಸ್ತರಿಸಿರುವುದು ಶ್ಲಾಘನೀಯ. ರಾಜಕಾರಣದಲ್ಲಿ ಸಮಸ್ಯೆಗಳು ಬಂದಾಗ ಶಾಂತಿ, ನೆಮ್ಮದಿ ಮತ್ತು ಮಾರ್ಗದರ್ಶನಕ್ಕಾಗಿ ಶ್ರೀ ಶ್ರೀಗಳವರ ದರ್ಶನ ಆಶೀರ್ವಾದಕ್ಕಾಗಿ ಶ್ರೀ ಮಠಕ್ಕೆ ಬರುತ್ತಿದ್ದುದನ್ನು ಸ್ಮರಿಸಿದರು. ರಾಜ್ಯದಲ್ಲಿ ಸಹಸ್ರಾರು ಮಠಗಳು ಮತ್ತು ಸ್ವಾಮಿಗಳಿದ್ದಾರೆ. ಆದರೆ ಮಾನವಕುಲ ಮೆಚ್ಚುವಂತೆ ಸಿದ್ಧಗಂಗಾ ಶ್ರೀಗಳು ಸೇವೆಯನ್ನು ಸಲಿಸುತ್ತಾ ಬಂದಿದ್ದಾರೆ. ಒಳ್ಳೆಯ ಕೆಲಸಮಾಡಿದರೆ ಸಮಾಜ ದೇಶ ಎಲ್ಲಾ ಕಾಲಕ್ಕೂ ನೆನೆಯುತ್ತದೆ. ಈ ಲೋಕದಿಂದ ನಾವು ಮೃತ್ಯು ಅಪ್ಪಿಕೊಳ್ಳುವುದಕ್ಕೆ ಮುಂಚೆ ಒಳ್ಳೆ ಕೆಲಸ ಕಾರ್ಯಗಳನ್ನು ಮಾಡಿ ಬಿಡುಗಡೆ ಹೊಂದಬೇಕು. ಶ್ರೀಶ್ರೀಗಳ ಆದರ್ಶ ಸಾಧನೆ, ಬಹುಮುಖ ಸೇವಾಕಾರ್ಯಗಳು ಸಾರ್ವತ್ರಿಕವಾಗಿ ಸ್ಮರಣೀಯ ವಾಗಿವೆ. ಯುವಜನತೆ ಮತ್ತು ಮುಂದಿನ ಪೀಳಿಗೆ ಇವರಿಂದ ಸ್ಫೂರ್ತಿಪಡೆಯ ಬೇಕೆಂದು ಆಶಿಸಿದರು.

ಬಸವಣ್ಣ ಹುಟ್ಟಿದ ನಾಡಿನಲ್ಲಿ ಧರ್ಮ, ಜಾತೀಯತೆ ಹೆಸರಿನಲ್ಲಿ ನಡೆಯುತ್ತಿರುವ ಅತ್ಯಾಚಾರಗಳನ್ನು ನೋಡಿದಾಗ ದೇಶ ಎತ್ತಸಾಗುತ್ತಿದೆ ಎಂಬ ಭೀತಿ ಎಲ್ಲೆಡೆ ವ್ಯಾಪಿಸಿದೆ. ಈ ದಿಶೆಯಲ್ಲಿ ಸುಧಾರಣಾ ಕೆಲಸವನ್ನು ಸಮಾಜದ ಮುಖಂಡರು, ಮಠಾಧಿಪತಿಗಳು ಮತ್ತು ರಾಷ್ಟ್ರನಾಯಕರು ಆರಂಭಿಸಬೇಕೆಂದರು.

ಶ್ರೀ ಶ್ರೀ ಗಳವರು ಇನ್ನೂರು ಶತಮಾನಗಳಕಾಲ ಇದ್ದು ನಮಗೆಲ್ಲಾ ಮಾರ್ಗ ದರ್ಶನ ಮಾಡುತ್ತಾ ಹರಸಿ ಹಾರೈಸಲೆಂದು ನಾಡಿನ ಭಕ್ತಾದಿಗಳ ಪರವಾಗಿ ಪ್ರಾರ್ಥಿಸಿದರು.

**ಭಕ್ತಿ ಸಮರ್ಪಣೆ:-** ಶ್ರೀಮಠದ ಉತ್ತರಾಧಿಕಾರಿಗಳಾದ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ನೆರವೇರಿಸಿ ನಮ್ಮ ಪೂಜ್ಯಗುರುಗಳು ಲಿಂಗಪೂಜಾನಿಷ್ಠೆ, ಕಾಯಕ ದಾಸೋಹಗಳ ಮಹಾಶಕ್ತಿಯಿಂದ ಶ್ರೀ ಮಠವನ್ನು ಕಟ್ಟಿದ್ದಾರೆ ಎಂಧರು. ಶ್ರೀಗಂಧದಂತ ಶಿವಯೋಗಿ ಶರೀರ ಸಮಾಜ ಸೇವೆಗಾಗಿ ಸದಾ ಸವೆಯುತ್ತಿರಬೇಕು ಎಂಬ ಅಂಶ ಎಚ್ಚರಗೊಳಿಸುತ್ತಿದೆ. ಪೂಜ್ಯರು ಒಪ್ಪುವಂತೆ ಕಾರ್ಯನಿರ್ವಹಿಸಿದರೆ ಅದೇ ಅವರಿಗೆ ನೀಡುವ ಭಕ್ತಿ ಸಮರ್ಪಣೆ ಎಂದು ಹೇಳಿದರು.

ಪೂಜ್ಯರಿಗೆ ಭಕ್ತಿಭಾವದಿಂದ ಹೂಮಾಲೆಗಳನ್ನು ಹಿಡಿದು ಸಾಲಾಗಿ ಬಂಧು ಅರ್ಪಿಸುತ್ತಿದ್ದ ದೃಶ್ಯ ಜನಸಮೂಹವನ್ನು ಧ್ಯಾನದಲ್ಲಿ ಮುಳುಗಿಸಿ ಭಕ್ತಿ ಪ್ರವಾಹ ಹರಿಸಿತ್ತು.

### ಶ್ರೀ ಉದ್ದಾನೇಶ್ವರ ಚರಿತಗ್ರಂಥ ಬಿಡುಗಡೆ:—

ಚನ್ನಪ್ಪ ಎರೆಸೀಮೆಯುವರಿಂದ ವಿರಚಿತವಾದ ಈ ಮಾಲಿಕೆಯನ್ನು ಮೈಸೂರು ಡಾ. ಎಲ್. ಬಸವರಾಜು ಬಿಡುಗಡೆ ಮಾಡಿ, ಅಟವೀ ಸ್ವಾಮಿಗಳು ಶ್ರೀ ಮಠಕ್ಕೆ ಅಡಿಪಾಯ, ಉದ್ದಾನಶಿವಯೋಗಿಗಳು ಕಳಸ, ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಜ್ಯೋತಿಪ್ರಭೆ ಇದ್ದಂತೆ ಎಂದರು. ಸರ್ಕಾರ, ನಾಯಕರು ಜನತೆಯನ್ನು ತಿದ್ದಲು ಸಾಧ್ಯವಿಲ್ಲ. ಮಠಾಧಿಪತಿಗಳು ಆಧ್ಯಾತ್ಮಿಕತೆಯಿಂದ ಇಂದಿನ ವಿಷಮ ಪರಿಸ್ಥಿತಿ ಸುಧಾರಿಸಬಹುದು. ಈ ದಿಶೆಯಲ್ಲಿ ಶ್ರೀ ಶ್ರೀ ಗಳು ಬಹಳವಾಗಿ ಶ್ರಮಿಸುತ್ತಿದ್ದಾರೆ, ಸಿದ್ಧಗಂಗಾಮಠ ಶರಣಧರ್ಮದ ಆಧಾರಸ್ತಂಭ ಎಂದರು.

ಮುಖ್ಯಮಂತ್ರಿ ವೀರಪ್ಪಮೊಯ್ಲಿ ಅವರ ಪರವಾಗಿ ಪ್ರತಿನಿಧಿಸಿ ಮಾತನಾಡಿದ ಕಾನೂನು ಸಚಿವ ಹಾರ್ನಹಳ್ಳಿ ರಾಮಸ್ವಾಮಿ ವೇದಾಂತಕ್ಕೆ ಪ್ರಸಿದ್ಧವಾದ ಭಾರತದಲ್ಲಿ ಸ್ವಾಮೀಜಿಗಳಂತಹ ಸತ್ಪುರುಷರ ಸೇವೆ ಸ್ಮರಣೀಯ ಎಂದರು.

ಮುಖ್ಯ ಅತಿಥಿಯಾಗಿ ಲೋಕಸಭೆ ಉಪಸಭಾಪತಿ ಎಸ್. ಮಲ್ಲಿಕಾರ್ಜುನಯ್ಯ ಪ್ರತಿಹಳ್ಳಿಗಳಲ್ಲಿ ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳ ಸಂಘದ ಶಾಖೆ ತೆರೆದು, ಸಮಾಜದ ಗ್ರಾಮೀಣ ಜನತೆಯ ಏಳಿಗೆಗೆ ದುಡಿಯಬೇಕೆಂದರು. ಇಲ್ಲಿಯ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ಬೃಹತ್ ಕಾರ್ಯಗಳನ್ನು ಪೂರ್ಣಗೊಳಿಸಲು ನಾಡಿನ ಜನತೆ ಶ್ರದ್ಧಾ ಭಕ್ತಿಯಿಂದ ಸಹಕಾರ ನೀಡಬೇಕೆಂದು ಮನವಿ ಮಾಡಿದರು.



ಯೋಜನಾ ಸಚಿವ ಟಿ.ಎಂ. ಮಂಜುನಾಥ್ ಅವರು ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಗಳು 20ನೇ ಶತಮಾನದ ವಿಭೂತಿ ಪುರುಷರೆಂದು ಬಣ್ಣಿಸಿದರು. ಬಸವಣ್ಣನವರನ್ನು ಜಗತ್ತಿಗೆ ತೋರಿಸಿ ಅವರ ಮಾರ್ಗದರ್ಶನದಲ್ಲಿ ನಡೆಯುತ್ತಿರುವವರು ಇವರೊಬ್ಬರೇ ಆಗಿದ್ದಾರೆ. ಭಾರತದಲ್ಲಿ 5000 ವಿದ್ಯಾರ್ಥಿಗಳಿಗೆ ಉಚಿತ ಊಟ, ವಸತಿ ನೀಡುತ್ತಿರುವ ಮಹಾಮಠ ಇದೊಂದೇ. ಶ್ರೀ ಶ್ರೀ ಗಳವರ ಪಾದಸ್ಪರ್ಶದಿಂದ ಪಾಪಗಳು ಪರಿಹಾರವಾಗುತ್ತವೆ. ಸರ್ವರನ್ನೂ ಸಮತಾಭಾವದಿಂದ ಕಾಣುವ ಸಾಮಾಜಿಕ ಕೇಂದ್ರವಾಗಿ ಶ್ರೀಮಠ ಬೆಳಗುತ್ತಿದೆ. ಪೂಜ್ಯರು ಶತಮಾನಕಾಲ ಮೀರಿ ಬಾಳಿ ಮಾರ್ಗದರ್ಶನ ನೀಡಲಿ ಎಂದು ಸರ್ಕಾರ ಮತ್ತು ನಾಡಿನ ಪರವಾಗಿ ಪ್ರಾರ್ಥಿಸಿದರು.

ರೇಷ್ಮೆಸಚಿವ ಡಾ. ಜಿ. ಪರಮೇಶ್ವರ ಅವರು ಇಂಥ ಪೂಜ್ಯ ಮಹಾನ್ ವ್ಯಕ್ತಿಗಳ ಪಾದಧೂಳಿಯಲ್ಲಿ ಬದುಕಿರುವುದೇ ನಮ್ಮ ಪುಣ್ಯ, ಶ್ರೀ ಶ್ರೀ ಗಳವರು ಆಧುನಿಕ ಬಸವಣ್ಣನವರಾಗಿದ್ದಾರೆ. ಶ್ರೀಮಠ ಅವರ ಘನವ್ಯಕ್ತಿತ್ವ ಮತ್ತು ತ್ಯಾಗದಿಂದ ಜಗತ್ತಿನಲ್ಲಿ ಪ್ರಖ್ಯಾತಿಗಳಿಸಿದೆ ಎಂದರು.

ಶಾಸಕ ಎಸ್. ಷಫಿಅಹಮದ್ ಹಾಗೂ ವಿಧಾನ ಪರಿಷತ್ ಸದಸ್ಯ ಟಿ. ಹೆಚ್. ನಾರಾಯಣಸ್ವಾಮಿ, ಸ್ವಾಮೀಜಿಗಳ ಸಮಾಜ ಸೇವೆ ಪ್ರಶಂಸಿದರು.

### ಸನ್ಮಾನಿತರ ನುಡಿ;—

1 ಬೆಂಗಳೂರು ಗೋಕುಲ ವಿದ್ಯಾಸಂಸ್ಥೆಯ ಛೇರ್ಮನ್ ಶ್ರೀ ಎಂ.ಎಸ್. ರಾಮಯ್ಯನವರು ವಿಶ್ವಕುಟುಂಬಿಗಳಾಗಿ "ಕಾಯಕವೇ ಕೈಲಾಸ" ಎನ್ನುವುದನ್ನು ಶ್ರೀ ಶ್ರೀಗಳವರ ಕೃತಿಯಲ್ಲಿ ತ್ರಿವಿಧ ದಾಸೋಹಕ್ಕೆ ಶ್ರೀಮಠ ದೇಶದಲ್ಲಿ ಪ್ರಖ್ಯಾತಿಗಳಿಸಿರುವುದೇ ಸಾಕ್ಷಿ. ಅವರ ಆಶೀರ್ವಾದ ಪಡೆದು ಪಾವನವಾಗಿದ್ದೇವೆಂದು ನುಡಿದರು.

2 ರಾಜ್ಯಸಭಾ ಸದಸ್ಯರು, ಬೆಳಗಾಂ ಕೆ. ಎಲ್. ಇ. ಸೊಸೈಟಿ ಅಧ್ಯಕ್ಷರಾದ ಪ್ರಭಾಕರ ಕೋರೆ ಬಸವಪ್ರಭುರವರು, ಶ್ರೀ ಶ್ರೀ ಗಳವರು ಆಶೀರ್ವಾದ ಕವಚ ಹೊದಿಸಿದ್ದಾರೆ. ಅವರ ಮಾರ್ಗದರ್ಶನದಂತೆ ನಡೆಯುತ್ತೇನೆಂದು ಹೇಳಿದರು.

3 ಹುಬ್ಬಳ್ಳಿ ಕೈಗಾರಿಕೋದ್ಯಮಿಗಳಾದ ಶ್ರೀ ಆರ್.ಎನ್. ಶೆಟ್ಟಿಯವರು, ಶ್ರೀ ಶ್ರೀಗಳವರು ಭಾರತದ ಮಠಾಧಿಪತಿಗಳಲ್ಲಿ ಅತಿದೊಡ್ಡಕಾರ್ಯ ಮಾಡಿತೋರಿಸಿದ್ದಾರೆ. ಈಪವಿತ್ರ ಕಾರ್ಯದಲ್ಲಿ ಎಲ್ಲರೂ ಸದ್ಭಾವನೆಯಿಂದ ನೆರವಾಗಬೇಕು, ಸಿದ್ಧಗಂಗಾ ಪುಣ್ಯ ಭೂಮಿಯಲ್ಲಿ ಅವರಿಂದ ಆಶೀರ್ವಾದ ಪಡೆದದ್ದು ಸುಕೃತಫಲ ಎಂದರು.

4 ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾದ ಗೊ. ರು. ಚನ್ನಬಸಪ್ಪ ಈ ಅಭೂತಪೂರ್ವ ಸಮಾರಂಭದಲ್ಲಿ ಮಾತಿಗಿಂತ ಮೌನವೇಲೇಸು ಎಂದು ಶ್ರೀ ಗುರುಚರಣಕ್ಕೆ ಪ್ರಣಾಮಗಳನ್ನು ಸಲ್ಲಿಸಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಶಿವಮೊಗ್ಗ ಜಿಲ್ಲೆ ಆನಂದಪುರ ಮಠದ ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಸ್ವಾಮಿಗಳು ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಹೇಗೆ ಬದುಕಿ ಕೆಲಸ ಮಾಡಿದ್ದಾರೆ ಎನ್ನುವುದಕ್ಕೆ ಇಲ್ಲಿ ನೆರೆದಿರುವ ಸಹಸ್ರ ಸಹಸ್ರ ಭಕ್ತ ಸ್ತೋಮ ಪ್ರತಿಪಾದಿಸುತ್ತದೆ. ವಿರಕ್ತ ಆಶ್ರಮ ಜೀವನವನ್ನು ಸಮರ್ಥವಾಗಿ, ಯಶಸ್ವಿಯಗಿ ನಿಭಾಯಿಸಿಕೊಂಡು ಬಂದಿದ್ದಾರೆ. ಇವರ ಬದುಕು ಸಾರ್ವಜನಿಕರ ಜೀವನಕ್ಕೆ ಮೀಸಲಾಗಿದೆ. ಪಾವಿತ್ರತೆಯ ಮಂಗಳ ಜ್ಯೋತಿಯಾಗಿ ನಾಡಿಗೆಲ್ಲಾ ಬೆಳಕನ್ನು ಚೆಲ್ಲಿದ್ದಾರೆ. ಕಾಯಕ, ದಾಸೋಹ ಮತ್ತು ಪೂಜಾನಿಷ್ಠೆಯಿಂದ ಮಹಾ ಕಾರ್ಯಗಳನ್ನು ಸಾಧಿಸಿದ್ದಾರೆ. ಇದರ ಸತ್ಪರಿಣಾಮವಾಗಿ ಸಮಾಜ ಕೃತಜ್ಞತೆಯಿಂದ ಸ್ಮರಿಸುತ್ತಿದೆ. ಆದರ್ಶ ಮಠಾಧಿಪತಿಗಳಾಗಿ ಶ್ರೀ ಮಠದ ಪರಂಪರೆಯನ್ನು ರಕ್ಷಿಸಿ ಬೆಳಸಿಕೊಂಡು ಬಂದಿದ್ದಾರೆ, ನಾಡಿಗೇ ಶ್ರೀಮಠ ಪಾಠವಾಗಿದೆ.

"ಭಗವಂತನನ್ನು ಕಾಣಲು ವ್ಯರ್ಥ ಮಾಡುವುದಕ್ಕಿಂತ ಆ ರೂಪದಲ್ಲಿರುವ ಶ್ರೀ ಶ್ರೀಗಳವರನ್ನು ಆರಾಧಿಸೋಣ" ಎಂದು ಕರೆಯಿತ್ತರು. ಬಸವಣ್ಣನವರು ಕಲ್ಯಾಣದಲ್ಲಿ ನೀಡಿದ ತತ್ವಗಳ ಸಂದೇಶವನ್ನು ಪ್ರಯೋಗಶಾಲೆಯನ್ನಾಗಿ ಶ್ರೀ ಮಠವನ್ನು ಪರಿವರ್ತಿಸಿದ್ದಾರೆ. ಶ್ರೀ ಉದ್ದಾನಶಿವಯೋಗಿಗಳವರ ಸಂಕಲ್ಪ ಶಕ್ತಿಯನ್ನು ಪರಿಪೂರ್ಣವಾಗಿ ಸಿದ್ಧಿ ಮಾಡಿ ತೋರಿದ್ದಾರೆ. ಇದು ಅನುಭವ ಮಂಟಪವೇಆಗಿ ಕಂಗೊಳಿಸುತ್ತಿದೆ, ಎಷ್ಟು ವರ್ಷಗಳು ಬದುಕುವುದು ಮುಖ್ಯವಲ್ಲ, ಜನತೆಯ ಉನ್ನತಿಗಾಗಿ ಬದುಕಬೇಕು.

ಪೂಜ್ಯರ ಕರ್ತೃತ್ವಶಕ್ತಿ ನಿರಂತರವಾಗಿ ನಮ್ಮ ನಾಡಿಗೆ ಲಭಿಸುವಂತಾಗಲಿ ಎಂದು ಹಾರೈಸಿದರು.

ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಆಶೀರ್ವಚನ

"ಎನ್ನವರು ಹೊಗಳಿ, ಹೊಗಳಿ ಹೊನ್ನಶೂಲಕ್ಕಿಕ್ಕಿದರು" ಎಂದ ಬಸವಣ್ಣನವರ ಮಾತನ್ನು ಸ್ಮರಿಸಿದರು. ವಿಜ್ಞಾನ ಮತ್ತು ತಂತ್ರಜ್ಞಾನದಿಂದ ಜಗತ್ತಿನಲ್ಲಿ ಮಾನವ ಸಮಾಜ ಸಂಕೊಚವಾಗುತ್ತಿದೆ. ಇದರ ಪರಿಣಾಮವಾಗಿ ದ್ವೇಷ, ಅಸೂಯೆ, ಘರ್ಷಣೆ ಪರಸ್ಪರ ತಪ್ಪು ತಿಳುವಳಿಕೆಯಿಂದ ಮಾನವರು ದಾನವರಾಗುತ್ತಿದ್ದಾರೆ. ಪರಮಾತ್ಮನ ಸೃಷ್ಟಿಯಲ್ಲಿ ಮಾನವ ಜೀವನ ಪವಿತ್ರವಾಗಿದೆ. ಇದನ್ನು ಅರಿತು ಭಾರತೀಯ ಸಂಸ್ಕೃತಿ ನಿರೂಪಿಸಿರುವ ಮಾನವೀಯ ಮೌಲ್ಯಗಳನ್ನು ಎಲ್ಲರೂ ತಮ್ಮ ಜೀವನದಲ್ಲಿ ಅನುಷ್ಠಾನಕ್ಕೆ ತರುವ ಮೂಲಕ ದೇಶ ಎದುರಿಸುತ್ತಿರುವ ಸಮಸ್ಯೆಗಳಿಗೆ ಪರಿಹಾರ ದೊರಯುತ್ತದೆ ನಮ್ಮ ಜೀವನವನ್ನು ಉದಾತ್ತಗೊಳಿಸುವ ದಿಶೆಯಲ್ಲಿ ಎಲ್ಲರೂ ಚಿಂತನ ಮಾಡಬೇಕಾಗಿದೆ ಎಂದು ಹಾರೈಸಿದರು.

ಬಿ. ಎಸ್ ಮಲ್ಲಿಕಾರ್ಜುನಯ್ಯ ಪ್ರಾರ್ಥನೆ ಸಲ್ಲಿಸಿದರು, ಟಿ. ಕೆ. ನಂಜುಂಡಪ್ಪ ಸ್ವಾಗತಿಸಿದರು. ಕೆ. ಎನ್. ರಾಜಶೇಖರ್ ಸಂದೇಶಗಳನ್ನು ಓದಿದರು. ಎಚ್. ವಿ. ವೀರಭದ್ರಯ್ಯ ಕಾರ್ಯಕ್ರಮ ನಿರೂಪಿಸಿದರು. ಕೆ.ಎಸ್. ಶಂಕರಯ್ಯ ವಂದಿಸಿದರು.

"SIDDAGANGA" MONTHLY Reg. No. KRNQ-9



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ, 572104.